पूर्णप्रज्ञसंशोधनमन्दिरम्
नवदेहलीस्थमानवसंसाधनविकासमन्त्रालयाधीन-
राष्ट्रियसंस्कृतसंस्थानेन सम्मानितम्

कागलूरु आनन्दतीर्थसूनुप्रणीतः

# स्मृतिमाणिक्यसङ्ग्रहः

सम्पादकः
डा. ए. वि. नागसम्पिगे
निदेशकः, पूर्णप्रज्ञसंशोधनमन्दिरम्

पूर्णप्रज्ञसंशोधनमन्दिरम्
पूर्णप्रज्ञविद्यापीठम्, बेङ्गलूरु-२८
२००५

पूर्णप्रज्ञसंशोधनमन्दिरम्
नवदेहलीस्थमानवसंसाधनविकासमन्त्रालयाधीन-
राष्ट्रियसंस्कृतसंस्थानेन सम्मानितम्

## कागलूरु आनन्दतीर्थसूनुप्रणीतः

# स्मृतिमाणिक्यसङ्ग्रहः

सम्पादकः
डा. ए.वि. नागसम्पिगे
निदेशकः, पूर्णप्रज्ञसंशोधनमन्दिरम्

पूर्णप्रज्ञसंशोधनमन्दिरम्
पूर्णप्रज्ञविद्यापीठम्
बेङ्गलूरु - २८

२००५

*पूर्णप्रज्ञसंशोधनमन्दिरग्रन्थमाला - २७*

**कागलूरु आनन्दतीर्थसूनुप्रणीतः**
**स्मृतिमाणिक्यसङ्ग्रहः**

सम्पादकः- डा. ए.वि. नागसम्पिगे

प्रकाशकः -
पूर्णप्रज्ञसंशोधनमन्दिरम्
पूर्णप्रज्ञविद्यापीठम्, कत्तरिगुप्पा मेन्रोड्,
बेङ्गलूरु - २८

प्रथममुद्रणम् - २००५

मुद्रितपुस्तकसङ्ख्या - १०००

मूल्यम् - ८० रूप्यकाणि

अक्षरसंयोजनम् - रम्या क्रियेशन्स्, बेङ्गलूरु

राष्ट्रोत्थानमुद्रणालयद्वारा मुद्रितम् ।

**POORNAPRAJNA SAMSHODHANA MANDIRAM**
Recognised by Rashtriya Sanskrit Samsthan, Deemed University,
Ministry of H.R.D., Govt. of India, New Delhi

# Smṛtimāṇikyasaṅgrahaḥ

of

Ānaṇdatīrtha Sūnu

*Editor*

**Dr. A.V. Nagasampige**
Director, Poornaprajna Samshodhana Mandiram, Bangalore.

*Publisher :*
**Poornaprajna Samshodhana Mandiram**
**Poornaprajna Vidyapeetha,**
**Bangalore - 560 028**

**2005**

Poornaprajna Samshodhana Mandiram Series No. 27

**Smṛtimāṇikyasaṅgrahaḥ**
**of Ānandatīrtha Sūnu**

*Editor* : **Dr. A.V. Nagasampige**

*Published by* :.
**Poornaprajna Samshodhana Mandiram**
Poornaprajna Vidyapeetha, Bangalore - 560 028.

First Edition : 2005

Copies : 1000

Price : Rs. 80/-

*Type setting* :
**Ramy Creations,** Bangalore

*Printed by* :
**Rashtrotthana Mudranalaya**, Bangalore.

## अनुग्रहसन्देशः

प्रातःप्रभृति सायान्तं सायादि प्रातरं च यत्कर्तव्यं विहितं च तद्ज्ञापनाय सर्वज्ञसूर्येण भगवत्पादाचार्येण सदाचारपद्धतिनिरूपणाय 'सदाचारस्मृति' नामकः प्रबन्धः निरमायि । पद्यमयस्यास्य ग्रन्थप्रवरस्यानेकानि गद्यमय-व्याख्यानानि उपलभ्यन्ते । इदानीं पुनः सदाचारस्मृतेः पद्यरूपायाः, प्रायः पद्यरूपैव व्याख्या कागलूरुवंशजेन निर्मिता मुद्राप्य विदुषां समर्पिताऽस्ति । एतावत्कालपर्यन्तं मुद्रितेषु व्याख्यानेष्वनुपलभ्यमाना अपूर्वाः प्रमेया अस्मिन् ग्रन्थे दृश्यन्ते । नदीनां तारतम्यम्, स्नाने फलभेदः, गायत्र्या उपासनाक्रमः, विधुराग्निसन्धानोपासनापद्धतिः, अनेकवारं शङ्खाभिषेकफलम्, पदार्थ-भेदेनाभिषेके फलभेदः इत्येवमादयो विषयाः सुस्पष्टं निरूपिताः ।

हरिचरणशरणाः सुजनाः ग्रन्थमेनमधीत्यात्रोक्तोपासनापद्धतिं चानुष्ठाय श्रीकृष्णानुग्रहं प्राप्नुवन्त्वित्याशास्महे । ग्रन्थस्यास्य शोधकं नागसम्पिगे इत्युपाह्वम् अस्मत्प्रियच्छात्रम् आनन्दतीर्थं भगवान् श्रीकृष्णः ज्ञानाभिवर्धनेन समनुगृह्णात्विति प्रार्थयामहे । ग्रन्थस्यास्य यथाशक्ति मुद्रणव्ययप्रदातॄन् श्रीमती सत्यवती तथा क.न. आनन्दतीर्थ इत्युपाह्वान् भगवान् श्रीकृष्णः आयुरारोग्यभाग्यप्रदानेन समनुगृह्णात्विति प्रार्थयामहे ।

**श्रीश्रीविश्वेशतीर्थश्रीपादाः**
**श्रीपेजावरमठाधीशाः**
**उडुपि**

# ಸ್ಮೃತಿಮಾಣಿಕ್ಯ ಸಂಗ್ರಹ

ಸುಜನರಿಗೆ ಸದಾಚಾರ ಪದ್ಧತಿಯನ್ನು ತಿಳಿಸುವ ಜಗದ್ಗುರು ಶ್ರೀಮನ್ ಮಧ್ವಾಚಾರ್ಯರ ಕೃತಿ - ಸದಾಚಾರಸ್ಮೃತಿ. ಈ ಗ್ರಂಥಕ್ಕೆ ಈವರೆಗೆ ಐದಾರು ವ್ಯಾಖ್ಯಾನಗಳು ಮುದ್ರಿತವಾಗಿದ್ದವು. ಇನ್ನು ಒಂದೆರಡು ವ್ಯಾಖ್ಯಾನಗಳು ಬೆಳಕು ಕಾಣಬೇಕಾಗಿದೆ. ಸದಾಚಾರಸ್ಮೃತಿಗೆ ಪದ್ಯಮಯವಾದ ವ್ಯಾಖ್ಯಾನ ಒಂದು ನನ್ನ ಕಣ್ಣಿಗೆ ಬಿದ್ದಿತು. ಮುದ್ರಿತ ವ್ಯಾಖ್ಯಾನಗಳಲ್ಲಿ ಕಾಣದ ಕೆಲವು ಅಪೂರ್ವ ವಿಷಯಗಳು ಇದರಲ್ಲಿ ಗೋಚರವಾದವು. ಇದನ್ನು ರಚಿಸಿದ ಮಹನೀಯರು ಕಾಗಲೂರು ಕುಲದ ಆನಂದತೀರ್ಥರ ಸುಪುತ್ರರು. ತಮ್ಮ ನಾಮವನ್ನು ಹೇಳಿಕೊಳ್ಳದಷ್ಟು ಸಜ್ಜನಿಕೆಯಿಂದ ಮೆರೆದಿದ್ದಾರೆ. ಈ ಸ್ಮೃತಿಮಾಣಿಕ್ಯ ಸಂಗ್ರಹದಲ್ಲಿ ಬರುವ ಕೆಲವು ವಿಷಯಗಳನ್ನು ವಾಚಕರ ಅವಗಾಹನೆಗೆ ತರುತ್ತಿದ್ದೇನೆ.

**ಎಲ್ಲವೂ ಶ್ರೀಹರಿಯ ಅಧೀನ**

ತೃಣ ಜೀವರಿಂದ ಆರಂಭಿಸಿ ನಾಲ್ಮೊಗನವರೆಗೆ ಬ್ರಹ್ಮಾಂಡದ ಒಳಗಿರುವ ಎಲ್ಲ ಜೀವರು ಶ್ರೀಹರಿಯ ಅಧೀನರು. ಅವನ ಪ್ರಚೋದನೆ ಇಲ್ಲದೆ ಯಾರು ಏನನ್ನೂ ಮಾಡಲಾರರು. ಎಲ್ಲ ಜೀವರ ಬಿಂಬನಾದ ಶ್ರೀಹರಿಯು, ಆಹಾರ ಸ್ವೀಕರಿಸಿದಾಗ ಜೀವರು ಆಹಾರ ಸ್ವೀಕರಿಸುವರು. ಅವನು ನುಡಿದಾಗ ನುಡಿವರು, ಕೇಳಿದಾಗ ಕೇಳುವರು. ಬಿಂಬರೂಪಿಯಾಗಿ ಅವನು ಮಾಡದ ಯಾವ ಕ್ರಿಯೆಯನ್ನೂ ಜೀವರು ಮಾಡಲಾರರು. ಹೀಗೆ ಸರ್ವ ಕಾರಣನಾದ ಪರಮಾತ್ಮನ ಕರ್ತೃತ್ವವನ್ನು ಮರೆತು ತಾನೇ ಕರ್ತೃವೆಂದು ಜೀವನು ತಿಳಿದಿರುವುದೇ ಸಂಸಾರದ ಬಂಧನಕ್ಕೆ ಕಾರಣವಾಗಿದೆ. ಜನನಮರಣಚಕ್ರ ಮತ್ತು ದುಃಖಮಯ ಸಂಸಾರದಿಂದ ಬಿಡುಗಡೆ ಹೊಂದಲು ಜೀವನು ಶ್ರೀಹರಿಯ ಸ್ವಾತಂತ್ರ್ಯವನ್ನು ಚೆನ್ನಾಗಿ ಮನನ ಗೈಯಬೇಕು. ಎಚ್ಚರದಿಂದ ಮಲಗುವ ತನಕ, ಗಾಢನಿದ್ರೆಯಿಂದ ಎಚ್ಚರದವರೆಗಿನ ಎಲ್ಲ ಅವಸ್ಥೆಗಳಲ್ಲೂ ಅವನ ಪ್ರೇರಣೆಯನ್ನು ಚೆನ್ನಾಗಿ ತಿಳಿಯಬೇಕು. ಹರಿಸ್ಮೃತಿಯೊಂದಿಗೆ ಮಾಡುವ ನಿಷ್ಕಾಮ ಕರ್ಮವು ಜ್ಞಾನವನ್ನು ದೊರಕಿಸುವ ಮೂಲಕ ಜೀವರಾಶಿಗಳ ಸಮುನ್ನತಿಗೆ ಕಾರಣವಾಗುವುದು.

**ಕರ್ಮದ ಆರು ಅಂಗಗಳು.**

ಯಾವುದೇ ಒಂದು ಕರ್ಮವು ಪರಿಪೂರ್ಣವೆನಿಸಲು ಆರು ಅಂಶಗಳು ಅಗತ್ಯವಾಗಿದೆ.

1. ಶ್ರುತಿಸ್ಮೃತಿಗಳ ಸ್ಪಷ್ಟತಿಳುವಳಿಕೆ.
2. ಶ್ರದ್ಧೆ
3. ಸಜ್ಜನರ ಸಹವಾಸ
4. ಪರದೇವತೆಯಲ್ಲಿ ಭಕ್ತಿ
5. ಕ್ರಿಯೆಯಲ್ಲಿ ಅಹಂಕಾರ ಮಮಕಾರವನ್ನು ತೊರೆಯುವುದು.
6. ಧಾರ್ಮಿಕ ಕಟ್ಟುಪಾಡುಗಳಿಗೆ ಒಳಪಡುವುದು.

ಈ ಆರು ಅಂಗಗಳು ನೆಲೆನಿಲ್ಲಲು ಇದಕ್ಕೆ ಪೂರಕವಾಗಿ ಐದು ಉಪಾಂಗಗಳ ಆವಶ್ಯಕತೆ ಇದೆ.

1. ಕಾಲಕ್ಕೆ ಸರಿಯಾಗಿ ಕರ್ಮದಲ್ಲಿ ತೊಡಗುವುದು.
2. ಯಥಾಶಕ್ತಿ ವಿಮರ್ಶೆ.
3. ಮನಸ್ಸನ್ನು ತಿಳಿಯಾಗಿ ಉಳಿಸಿಕೊಳುವುದು.
4. ಪರಿಸರದ ಶುಚಿತ್ವವನ್ನು ಕಾಪಾಡಿಕೊಳ್ಳುವುದು.
5. ಕ್ಷುದ್ರಕಾಮನೆಯನ್ನು ತೊರೆಯುವುದು.

ಶ್ರೀಹರಿಯ ಪ್ರೀತಿಯನ್ನು ಬಯಸುವುದು ಎಲ್ಲ ಕರ್ಮಗಳಿಗೂ ಪೂರ್ಣತೆಯನ್ನು ದೊರಕಿಸಿ ಕೊಡುತ್ತದೆ. ವೇದೋಕ್ತ ಕರ್ಮಾನುಷ್ಠಾನ ಮಾಡುವವರು ಈ ಅಂಶಗಳ ಕಡೆಗೆ ಗಮನವಿಡುವುದು ಅವಶ್ಯವಾಗಿದೆ (ಶ್ಲೋಕ-2-20)

**ಶೌಚವಿಧಿಯ ಇತಿ ಮಿತಿ.**

ಮಲ ಮೂತ್ರಗಳನ್ನು ವಿಸರ್ಜಿಸಿದಾಗ ಆ ದ್ವಾರಗಳನ್ನು ಹಾಗೂ ಕೈಕಾಲು

ಗಳನ್ನು ಮಣ್ಣಿನಿಂದ ಅನೇಕ ಬಾರಿಗೆ ತೊಳೆಯಬೇಕು. ಧರ್ಮಶಾಸ್ತ್ರಗಳ ಸಂಖ್ಯಾ ನಿಯಮವು ದುರ್ಗಂಧ ನಿವಾರಣೆ ಮತ್ತು ಮನಸ್ಸಪ್ತಿಯ ಹಿನ್ನೆಲೆಯಲ್ಲಿ ಮೂಡಿ ಬಂದಿದೆ. ಹಗಲಿನಲ್ಲಿ ನಡೆಸುವ ಶೌಚ ಪದ್ಧತಿಗಿಂತ ಅರ್ಧದಷ್ಟು ರಾತ್ರಿಯಲ್ಲಿ ಶೌಚನಿಯಮವನ್ನು ಮೊಟಕುಗೊಳಿಸಬಹುದು. ರೋಗಿಯಾದ ವ್ಯಕ್ತಿಗೆ ನಿರ್ದಿಷ್ಟ ನಿಯಮಗಳ ಆಚರಣೆಯು, ನಾಲ್ಕನೆ ಒಂದು ಭಾಗ ಮಾತ್ರವೇ ಇರಬಹುದು. ನಮ್ಮ ಊರಿನಲ್ಲಿ, ನಮ್ಮ ಮನೆಯಲ್ಲಿ ಆಚಾರ ನಿಯಮಗಳನ್ನು ಸಂಪೂರ್ಣವಾಗಿ ಜಾರಿಗೊಳಿಸಬೇಕು. ಪರ ಊರಿನಲ್ಲಿ ಅದರ ಅರ್ಧವನ್ನಾದರು ಪಾಲಿಸಲು ಯತ್ನಿಸಬೇಕು. ದೊಡ್ಡ ಪಟ್ಟಣಗಳಲ್ಲಿ ನಾಲ್ಕನೆ ಒಂದು ಭಾಗದಷ್ಟು ಆಚಾರ ನಿಯಮಗಳು ನಡೆಸಿದರು ಅಡ್ಡಿ ಇಲ್ಲ. ವ್ಯಕ್ತಿಯು ಸಂಚಾರಿಯಾಗಿರುವಾಗ ಸಂಭವಿಸುವ ನಿಯಮ ಶೈಥಿಲ್ಯವು ಅಂಗೀಕಾರಾರ್ಹವಾಗಿದೆ. ಆದರೂ ಹೆಚ್ಚು ಹೆಚ್ಚು ಶುದ್ಧಿಯನ್ನು ಕಾಪಾಡಿಕೊಳ್ಳುವತ್ತ ನಾವು ಜಾಗೃತರಿರಬೇಕು (ಶ್ಲೋ 50-51)

**ಬೆಳಗುಜಾವದ ಸ್ನಾನ ಮಹಾಫಲದಾಯಕ**

**'ಆಪೋ ವೈ ಸರ್ವ ದೇವತಾಃ'** ಎಂಬ ಋಷಿವಚನದಂತೆ ನೀರಿನಲ್ಲಿ ಎಲ್ಲ ದೇವತೆಗಳ ಸನ್ನಿಧಾನವಿರುತ್ತದೆ. ಬೆಳಗು ಜಾವದ ಬ್ರಾಹ್ಮೀ ಮೂಹೂರ್ತದಲ್ಲಿ (4.30 ಘಂಟೆ ಹೊತ್ತಿಗೆ) ನೀರಿನಲ್ಲಿ ಗಂಗಾದಿ ಸಕಲ ತೀರ್ಥಗಳ ಸನ್ನಿಧಾನವು ಜಾಗೃತವಾಗಿರುತ್ತದೆ. ಆದ್ದರಿಂದ ಆ ಕಾಲದಲ್ಲಿ ಸ್ನಾನವನ್ನು ಮಾಡುವುದು ಅತ್ಯಂತ ಶ್ರೇಯಸ್ಕರವಾಗಿದೆ. ಸ್ನಾನವಿಲ್ಲದ ಯಾವ ಧರ್ಮಕಾರ್ಯಗಳೂ ಫಲಪ್ರದ ವಾಗಲಾರವು. ವೇದಗಳು ವರ್ಣಿಸಿದ ಕರ್ಮಾನುಷ್ಠಾನವನ್ನು ನಡೆಸಲು ಶೌಚ ಮತ್ತು ಸ್ನಾನಗಳು ಅತ್ಯಾವಶ್ಯವಾಗಿವೆ. ಶೌಚ ಮತ್ತು ಸ್ನಾನಗಳು ತಾಯಿ ಮತ್ತು ತಂದೆ ಯಂತೆ ಆದರಣೀಯವಾಗಿವೆ. ಪ್ರಾತಃ ಕಾಲದಲ್ಲಿ ಮೀಯುವವನು ಸೌಭಾಗ್ಯ, ಯೋಗ್ಯಕಾಲದಲ್ಲಿ ಸ್ತ್ರೀಸುಖ, ಪುಷ್ಟಿ, ಪುಣ್ಯ, ವಿದ್ಯೆ, ಕೀರ್ತಿ ಮೊದಲಾದ ಫಲಗಳನ್ನು ಪಡೆಯುತ್ತಾನೆ. ನೀರಿನಿಂದ ಮೈ ತೊಳೆಯುವಾಗ ಪಾತಕಗಳನ್ನು ತೊಳೆದುಕೊಳ್ಳುವುದರ ಜೊತೆಗೆ ದುಸ್ವಪ್ನ ಸೂಚಿತವಾದ ಅನಿಷ್ಟ ಮತ್ತು ದುಷ್ಟಚಿಂತನೆಯಿಂದ ಒದಗುವ ಪಾಪಗಳನ್ನು ತೊಳೆದುಕೊಳ್ಳಬಹುದು. (ಶ್ಲೋ 174-182) ಈ ಪ್ರಸಂಗದಲ್ಲಿ ಮಹಾಭಾರತ ಉದ್ಯೋಗ ಪರ್ವದ ವಿದುರ ನೀತಿಯ ಮಾತೊಂದನ್ನು ಉಲ್ಲೇಖಿಸಬಹುದಾಗಿದೆ-

**ಗುಣಾ ದಶ ಸ್ನಾನಶೀಲಂ ಭಜಂತೆ**
**ಬಲಂ ರೂಪಂ ಸ್ವರ ವರ್ಣ ಪ್ರಶುದ್ಧಿಃ।**
**ಸ್ಪರ್ಶಶ್ಚ ಗಂಧಶ್ಚ ವಿಶುದ್ಧತಾ ಚ**
**ಶ್ರೀಸೌಕುಮಾರ್ಯಂ ಪ್ರವರಾಶ್ಚ ನಾರ್ಯಃ॥**

ಬ್ರಾಹ್ಮೀ ಮುಹೂರ್ತದಲ್ಲಿ ಸ್ನಾನ ಮಾಡುವ ವ್ಯಕ್ತಿಯನ್ನು ಹತ್ತು ಗುಣಗಳು ಅರಸಿ ಕೊಂಡುಬರುತ್ತವೆ. ಬಲ, ಸೌಂದರ್ಯ, ಸ್ವರಶುದ್ಧಿ ಆಕರ್ಷಕ ಮೈಬಣ್ಣ ಸೌಷ್ಠವ, ಸುಗಂಧ, ಸ್ವಚ್ಛತೆ, ಕಾಂತಿ, ಮಾರ್ದವ, ಉತ್ತಮ ಹೆಂಗಳೆಯರು. ಈ ದೃಷ್ಟಿಯಿಂದ ಭಗವದನುಸಂಧಾನಪುರಸ್ಸರವಾದ, ಸ್ನಾನವು ಅತ್ಯಂತ ಆವಶ್ಯಕವಾಗಿದೆ.

**ವಸ್ತ್ರಶುದ್ಧಿಯ ಇತಿ ಮಿತಿ**

ಹೋಮ, ದೇವತಾರ್ಚನ ಮೊದಲಾದ ವೈದಿಕ ಕರ್ಮಗಳಲ್ಲಿ ಕಡ್ಡಾಯ ವಾಗಿ ಶುದ್ಧವಾದ ಮತ್ತು ಶುಕ್ಲವಾದ ಎರಡು ವಸ್ತ್ರಗಳನ್ನು ಧರಿಸಿರಬೇಕು. ವಸ್ತ್ರವನ್ನು ಉಡುವಾಗ ಕಚ್ಚೆಯನ್ನು ಧರಿಸದಿರುವುದು ಅಥವಾ ಕಚ್ಚೆಯ ಸ್ವಲ್ಪ ಭಾಗವನ್ನು ಸರಿಯಾಗಿ ಬಂಧಿಸದೇ ಇರುವುದು ದೋಷವೆನಿಸುತ್ತದೆ. ಕಚ್ಚೆ ಇಲ್ಲದೆಯೇ ಬರಿವಸ್ತ್ರವನ್ನು ಸುತ್ತಿಕೊಳ್ಳುವವನು, ಮೇಲ್ವಸ್ತ್ರ ಇಲ್ಲದವನು 'ನಗ್ನ'ನೆನಿಸುವನು. ಕೆಂಪು ಬಟ್ಟೆ, ಕಪ್ಪು ಬಟ್ಟೆ ಅಂಚಿಲ್ಲದ ಬಟ್ಟೆ ಮತ್ತು ಒದ್ದೆಯಾದ ಬಟ್ಟೆಗಳನ್ನು ಧರಿಸಬಾರದು. ಗೃಹಸ್ಥನು ಮೇಲ್ವಸ್ತ್ರದ ಪ್ರತಿನಿಧಿಯಾಗಿ ಮೂರು ಎಳೆ ಯಜ್ಞೋಪವೀತವನ್ನು ಧರಿಸಬಹುದಾಗಿದೆ. ಹತ್ತಿಯ ಬಟ್ಟೆಯು ಒಂದು ದಿನ ಶುದ್ಧಿಯನ್ನು ಹೊಂದಿರುತ್ತದೆ. ರೇಶ್ಮೆ ವಸ್ತ್ರವು ಹತ್ತು ದಿನ ಶುದ್ಧವೆನಿಸುವುದು. ನಾರು ಮಡಿಯು ಏಳು ದಿನ ಶುದ್ಧವೆನಿಸುತ್ತದೆ. ಉಣ್ಣೆಯ ವಸ್ತ್ರವು ಯಾವಾಗಲೂ ಶುದ್ಧವಾಗಿರುತ್ತದೆ. ದೂರದ ಪ್ರಯಾಣದಲ್ಲಿರುವಾಗ, ಅನಾರೋಗ್ಯದಲ್ಲಿರುವಾಗ ಅಥವಾ ಅಶಕ್ತರಾಗಿರುವಾಗ, ಒಂದೇ ರೇಶ್ಮೆ ವಸ್ತ್ರವನ್ನು ಪ್ರತಿದಿನ (ಮಾಸದ ವರೆಗೆ) ದೇವ ಪೂಜಾದಿ ಕಾರ್ಯಗಳಿಗೂ ಕೂಡ ಬಳಸಬಹುದು. ಆಪತ್ತಿಲ್ಲದಿರುವಾಗ ಪ್ರತಿದಿನವೂ ಪ್ರತ್ಯೇಕವಸ್ತ್ರಗಳನ್ನು ಬಳಸುವುದು ಉಚಿತವಾಗಿದೆ.

**ಗೋಪಿಚಂದನ ಧಾರಣೆಯ ಮಹತ್ವ**

ಗೋಪಿಚಂದನ ಧಾರಣೆಯು ವೇದೋಕ್ತ ಕರ್ಮಾನುಷ್ಠಾನದ ಪ್ರಧಾನ ಅಂಗವೆನಿಸಿದೆ. ಸಂಧ್ಯಾವಂದನೆ-ಶ್ರಾದ್ಧ-ಪಾಠ-ಪ್ರವಚನ-ಯಜ್ಞಾನುಷ್ಠಾನ, ವೇದಾಭ್ಯಾಸ-ಪಿತೃತರ್ಪಣ ಮೊದಲಾದ ಕಾರ್ಯಗಳನ್ನು ಊರ್ಧ್ವ ಪುಂಡ್ರವನ್ನು ಧರಿಸದೆ ಮಾಡಿದರೆ ಫಲ ದೊರೆಯಲಾರದು. ಗೋಪೀಚಂದನ ಧರಿಸದವನು ವೇದೋಕ್ತ ಕರ್ಮಾನುಷ್ಠಾನಕ್ಕೆ ಅಧಿಕಾರಿ ಎನಿಸಲಾರನು. ಹೆಣ್ಣುಮಕ್ಕಳು ಊರ್ಧ್ವಪುಂಡ್ರವನ್ನು ಧರಿಸಿ ಅದರ ಮೇಲ್ಭಾಗದಲ್ಲಿ ಕುಂಕುಮವನ್ನು ಧರಿಸಬೇಕು. ಊರ್ಧ್ವಪುಂಡ್ರವನ್ನು ಧರಿಸದೆಯೇ ಮಾಡುವ ಸ್ತ್ರೀಪಾಕವು ಸರ್ವಥಾ ತ್ಯಾಜ್ಯವಾಗಿದೆ. ಊರ್ಧ್ವಪುಂಡ್ರವನ್ನು ಧರಿಸದ ಸ್ತ್ರೀಯ ಪಾಕವು ಮದ್ಯದಂತೆ ತ್ಯಾಜ್ಯವಾಗಿದೆ. ಊರ್ಧ್ವಪುಂಡ್ರವಿಲ್ಲದ ವ್ಯಕ್ತಿಯ ಮುಖವು ಸ್ಮಶಾನದಂತೆ ಅಶುಚಿ ಎನಿಸುವುದು. ಅಂತಹ ಮುಖವನ್ನು ನೋಡಿ ಪ್ರಾಯಶ್ಚಿತ್ತ ರೂಪವಾಗಿ ಸೂರ್ಯನನ್ನು ನೋಡಬೇಕು. ಈ ಹಿನ್ನೆಲೆಯಲ್ಲಿ ಮಹಾಫಲಕ್ಕೆ ಕಾರಣವಾಗುವ ಊರ್ಧ್ವಪುಂಡ್ರವನ್ನು ಅವಶ್ಯ ಧರಿಸಲೇಬೇಕು.

**ತುಲಸೀಮಾಲೆಯನ್ನು ಧರಿಸಬೇಕು**

ವೇದೋಕ್ತಕರ್ಮಾನುಷ್ಠಾನಕ್ಕೆ ತುಲಸೀ ಮಾಲೆಯ ಧಾರಣೆಯು ಅತ್ಯಂತ ಯೋಗ್ಯವಾಗಿದೆ. ಕೊರಳಲ್ಲಿ ತುಲಸೀ ಮಣಿಮಾಲೆಯನ್ನು ಧರಿಸಿದವನನ್ನು ನೋಡಿದ ವ್ಯಕ್ತಿಯೂ ಮುಕ್ತಿಪಡೆಯುವನು. ಯಾರು ತುಲಸೀ ಮಾಲೆಯನ್ನು ಶ್ರೀಹರಿಗೆ ಸಮರ್ಪಿಸಿ ಕೊರಳಲ್ಲಿ ಧರಿಸುವರೋ ಅವರಿಗೆ ಯಾವ ಪಾಪಗಳೂ ಲೇಪವಾಗಲಾರವು. ತುಲಸೀಯ ಎಲೆಗಳಿಂದ ನಿರ್ಮಿಸಿದ ಮಾಲೆಯನ್ನು ಧರಿಸುವ ಸಾಧಕನಿಗೆ ಅಶೌಚವಿರುವುದಿಲ್ಲ. ಯಾರು ತುಲಸೀದಳಗಳಿಂದ ಮಾಡಿದ ಮಾಲೆಯನ್ನು ಶ್ರೀಹರಿಗೆ ಸಮರ್ಪಿಸಿ, ಪ್ರಸಾದ ರೂಪವಾಗಿ ಧರಿಸುವರೋ ಅವರು ಒಂದೊಂದು ತುಲಸೀ ದಳದ ಧಾರಣೆಯ ಮೂಲಕ ಅನೇಕ ಅಶ್ವಮೇಧಯಾಗದ ಫಲವನ್ನು ಪಡೆಯುವರು. ಯಾರ ದೇಹದಲ್ಲಿ ತುಲಸೀ ಕಾಷ್ಠದ ಮಾಲೆಯಿರುವುದೋ ಅವರ ದೇಹವನ್ನು ಕಲಿ ತನ್ನ ಕರಾಳ ಬಾಹುಗಳಿಂದ ಆಕ್ರಮಿಸುವುದಿಲ್ಲ.

**ಮೂರು ಬಾರಿಗೆ ಸಂಧ್ಯಾವಂದನ**

ನಾವು ಪ್ರತಿನಿತ್ಯ ಮಾಡುವ ಪಾಪಗಳನ್ನು ತೊಳೆದುಕೊಳ್ಳಲು ಮೂರು ಕಾಲದಲ್ಲಿ ಸಂಧ್ಯಾವಂದನೆಯನ್ನು ಆಚರಿಸಬೇಕು. ಕಾಲಕ್ಕೆ ಸರಿಯಾಗಿ, ಸಂಧ್ಯಾವಂದನೆಯನ್ನು ಮಾಡದವನು ಅನುಕೂಲತೆ ಇದ್ದರೂ ವಿಲಂಬವಾಗಿ ಸಂಧ್ಯೆಯನ್ನು ಆಚರಿಸುವವನು, ಸೂರ್ಯನನ್ನು ಕೊಂದ ಪಾಪಕ್ಕೆ ಭಾಗಿಯಾಗುವನು. ಮೃತಿಯನಂತರ ಗೂಬೆಯಾಗಿ ಜನ್ಮ ಪಡೆಯುವನು. ಆದ್ದರಿಂದ ಕಾಲಕ್ಕೆ ಸರಿಯಾಗಿ ಸಂಧ್ಯಾವಂದನೆಯನ್ನು ನಡೆಸಬೇಕು. ಉಪನಯನ ಸಂಸ್ಕಾರದ ನಂತರ, ಬೆಳಗಿನಜಾವ, ಮಧ್ಯಾಹ್ನ ಮತ್ತು ಸಂಜೆಯ ಕಾಲದಲ್ಲಿ (ಮೂರು ಬಾರಿಗೆ ) ಸಂಧ್ಯಾವಂದನೆಯನ್ನು ನಡೆಸಬೇಕು. ಬೆಳಗು ಜಾವದ ಸಂಧ್ಯೆಯನ್ನು ನಕ್ಷತ್ರ ಇರುವಾಗಲು, ಮಧ್ಯಾಹ್ನ ಸಂಧ್ಯೆಯನ್ನು ಮಧ್ಯಾಹ್ನ 12.00 ಘಂಟೆಯಿಂದ 2.30ರಒಳಗೆ. ಸಾಯಂ ಸಂಧ್ಯೆಯನ್ನು ಸೂರ್ಯನು ಮುಳುಗುವುದರ ಮೊದಲು ಆಚರಿಸಬೇಕು.

**ಯಂತ್ರ ಲೇಖನ ಮತ್ತು ಅರ್ಘ್ಯಪ್ರದಾನ**

ದೈತ್ಯರ ರಕ್ಷಣೆಗಾಗಿ ವೇತ್ರಪನೆಂಬ ಅಸುರನು ಶುಕ್ರಾಚಾರ್ಯರ ಆದೇಶ ದಂತೆ ಯಾವಾಗಲೂ ನೀರಿನಲ್ಲಿರುವನು. ಪವಿತ್ರವಾದ ನೀರನ್ನು ತನ್ನ ಅಸ್ತಿತ್ವದ ಮೂಲಕ ಮಲಿನಗೊಳಿಸುವ ಆ ದಾನವನನ್ನು ಹೊರಗೆಹಾಕಲು ಅರ್ಘ್ಯನೀಡುವ ನೀರಿನಲ್ಲಿ ತ್ರಿಕೋಣಾಕಾರದ ವ್ಯಾಹೃತಿಯಂತ್ರವನ್ನು ಬರೆಯಬೇಕು. ಕೋಣದ ಮಧ್ಯದಲ್ಲಿ 'ಹ್ರೀ' ಕಾರವನ್ನುಕೋಣದ ಮೇಲ್ಭಾಗದ ಹೊರಗೆ 'ಓಂ' ಕಾರವನ್ನು ಬರೆಯಬೇಕು. ಕೋಣಗಳ ಮೂರು ಪಾರ್ಶ್ವಗಳಲ್ಲಿ 'ಭೂಃ, ಭುವಃ, ಸ್ವಃ' ಎಂಬ ವ್ಯಾಹೃತಿಗಳನ್ನು ಬರೆಯಬೇಕು. ಕೋಣದ ಮಧ್ಯಭಾಗದಲ್ಲಿ ವರುಣಮಂತ್ರದ ಬೀಜಾಕ್ಷರವಾದ 'ವಂ' ಎಂಬ ವರ್ಣವನ್ನು ಬರೆಯಬೇಕು. ಮೂರು ಅರ್ಘ್ಯಗಳಲ್ಲಿ ಮೊದಲ ಅರ್ಘ್ಯದಿಂದ ನಂದಪ ಎಂಬ ಅಸುರನ ಸಂಹಾರವಾಗುವುದು. ಎರಡನೆಯ ಅರ್ಘ್ಯಪ್ರದಾನದಿಂದ ಅವನ ವಾಹನ ನಾಶವಾಗುವುದು. ಮೂರನೇ ಅರ್ಘ್ಯದಿಂದ ದಾನವರ ಶಸ್ತ್ರನಾಶವಾಗುವುದು. ಹೀಗೆ ಅರ್ಘ್ಯವನ್ನು ಕೊಟ್ಟು ಹರಿಕೈಂಕರ್ಯವನ್ನು ಮಾಡಬೇಕು. ಮೂರುವರೆ

ಕೋಟಿಸಂಖ್ಯೆಯಲ್ಲಿ ಮಂದೇಹ ಎಂಬ ಹೆಸರಿನ ರಾಕ್ಷಸರು ಸೂರ್ಯನನ್ನು ಹಿಂಸಿಸಲು ಪ್ರಯತ್ನಿಸುವರು. ಚತುರ್ಮುಖನು ಈ ದೈತೇಯರಿಗೆ ಅಕ್ಷಯ ಶರೀರವನ್ನು ಪ್ರತಿನಿತ್ಯ ಮರಣವನ್ನು ವರವಾಗಿ ಕರುಣಿಸಿರುವನು. ಸೂರ್ಯನೊಡನೆ ಪ್ರತಿದಿನವು ಯುದ್ಧವು ನಡೆಯುವುದು. ಬ್ರಾಹ್ಮಣರು ಕೊಡುವ ಈ ಅರ್ಘ್ಯದಿಂದ ದಾನವರ ಸಂಹಾರವಾಗುವುದು. ಅನಂತರ ಅಡೆತಡೆಗಳಿಲ್ಲದೆ ಸೂರ್ಯರಥವು ವೇಗವಾಗಿ ಚಲಿಸುವುದು.

**ಸಾಯಂಸಂಧ್ಯೆ ಹೊರಗೆ ಮಾಡುವುದು ಪ್ರಶಸ್ತವೆನಿಸಿದೆ.**

ಸಾಯಂ ಸಂಧ್ಯಾವಂದನೆಯನ್ನು ಮನೆ ಮುಂದೆ ಇರುವ ತುಳಸಿ ಕಟ್ಟೆ ಅಥವಾ ಗೋಶಾಲೆ ಮುಂತಾದವುಗಳ ಹತ್ತಿರ ಮಾಡುವುದು ಪ್ರಶಸ್ತವಾಗಿದೆ. ಮನೆಯಿಂದ ಹೊರಗೆ ಜಲಾಶಯದಲ್ಲಿ ಸಂಧ್ಯಾವಂದನೆ ನಡೆಸುವುದು ಮತ್ತೂ ಪ್ರಶಸ್ತವೆನಿಸಿದೆ. ಇದರಿಂದ ಐದು ಬಗೆಯಪ್ರಯೋಜನವಿದೆ - 1. ಆಕಸ್ಮಿಕ ಸುಳ್ಳು ಮಾತನಾಡುವುದು, 2. ದಾರಿಯಲ್ಲಿ ಹೋಗುವಾಗ ಬಯಸದೇ ಅಪ್ರಯತ್ನವಾಗಿ ಘ್ರಾಣೇಂದ್ರಿಯಕ್ಕೆ ಗೋಚರವಾದ ಮದ್ಯಗಂಧ, 3. ಹಗಲು ನಿದ್ರೆ, 4. ಹಗಲಿನಲ್ಲಿ ಪತ್ನಿಯ ಸಂಗ. 5. ಅಸಂಸ್ಕೃತ ಅನ್ನ ಸ್ವೀಕಾರ ಮೊದಲಾದ ಪಾಪಗಳಿಂದ ಬಿಡುಗಡೆ ಪಡೆಯಬಹುದಾಗಿದೆ. ರಾತ್ರಿಯಲ್ಲಿ ತ್ರಿಕರಣಗಳಿಂದ ಮಾಡಿದ ಪಾಪವನ್ನು ಬೆಳಗುಜಾವದ ಸಂಧ್ಯಾವಂದನೆಯಲ್ಲಿ ನಡೆಸುವ ಹೆಚ್ಚಿನ ಪ್ರಾಣಾಯಾಮಗಳಿಂದ ಕಳೆದುಕೊಳ್ಳಬಹುದಾಗಿದೆ. ಬೆಳಗಿನಿಂದ ಸಂಜೆ ವರೆಗಿನ ಪಾಪಗಳನ್ನು ಸಾಯಂ ಸಂಧ್ಯೆಯ ಕಾಲದಲ್ಲಿ ಹೆಚ್ಚು ಪ್ರಾಣಾಯಾಮಗಳ ಮೂಲಕ ಕಳೆದು ಕೊಳ್ಳಬಹುದಾಗಿದೆ.

**ಯೋಗ್ಯ ಸ್ಥಳದಲ್ಲಿ ಜಪಾನುಷ್ಠಾನ ಫಲದಾಯಕ.**

ನಾವು ಸಾಮಾನ್ಯವಾಗಿ ಮನೆಯಲ್ಲಿ ಜಪಮಾಡುತ್ತೇವೆ. ಇದೇ ಜಪವನ್ನು ಗೋಶಾಲೆಯಲ್ಲಿ ನಡೆಸಿದರೆ ನೂರ್ಮಡಿ ಫಲವು ದೊರಕುವುದು. ಪುಣ್ಯ ತೀರ್ಥಗಳಲ್ಲಿ ನಡೆಸುವ ಮಂತ್ರ ಜಪವು ಸಾವಿರ ಪಟ್ಟು ಫಲವನ್ನು ದೊರಕಿಸಿಕೊಡುವುದು. ಶಾಲಗ್ರಾಮ ಹಾಗು ವಿಶಿಷ್ಟ ಭಗವದ್ರೂಪಗಳ ಸನ್ನಿಧಾನದಲ್ಲಿ ಅನಂತ ಫಲದಾಯಕವಾಗಿದೆ. ದೇಗುಲ ಮೊದಲಾದವುಗಳಲ್ಲಿ ಶ್ರೀಹರಿಗೆ ಪೂರ್ವಾಭಿಮುಖವಾಗಿ ನಡೆಸುವ ಜಪವು ಆಯುರ್ವೃದ್ಧಿಗೆ

ಕಾರಣವಾಗಿದೆ. ಆಗ್ನೇಯ ದಿಕ್ಕಿಗೆ ಅಭಿಮುಖವಾಗಿ ಜಪಿಸುವುದರಿಂದ ಕಲಹ ಸಂಭವಿಸುವುದು. ದಕ್ಷಿಣ ದಿಕ್ಕಿನಲ್ಲಿ ಜ್ಞಾನವೃದ್ಧಿಯಾಗುವುದು. ನೈಋತ್ಯ ದಿಕ್ಕಿನಲ್ಲಿ ಜಪಾನುಷ್ಠಾನ ಮರಣ ಕಾರಣವಾಗಬಹುದು. ಪಶ್ಚಿಮ ದಿಕ್ಕಿನಲ್ಲಿ ಜಪಾನುಷ್ಠಾನವು ಮೋಕ್ಷಸಾಧನವಾಗುವುದು. ವಾಯವ್ಯ ಮತ್ತು ಉತ್ತರ ದಿಕ್ಕಿನಲ್ಲಿ ಜಪಾನುಷ್ಠಾನವು ಆಕರ್ಷಣೆ ಮತ್ತು ತ್ರಿಪ್ರದಾಯಕವಾಗಿದೆ. ಈಶಾನ್ಯದಿಕ್ಕಿನಲ್ಲಿ ನಡೆಸುವ ಜಪಾನುಷ್ಠಾನದಿಂದ ದುಷ್ಟಶಕ್ತಿಗಳು ನಾಶವಾಗುವುದು. ಪ್ರತಿಮೆಗೆ ಅಭಿಮುಖವಾಗಿ ಕುಳಿತು ಜಪಿಸುವುದು ಸಕಲವಿಧ ಸಿದ್ಧಿಗೆ ಕಾರಣವಾಗಿದೆ. ಸೂರ್ಯ, ಅಗ್ನಿ, ಗುರು, ಚಂದ್ರ, ದೀಪ, ಜಲ-ಬ್ರಾಹ್ಮಣ-ಹಸು ಮೊದಲಾದವುಗಳಿಗೆ ಅಭಿಮುಖವಾಗಿ ಜಪವನ್ನು ನಡೆಸಬೇಕು. (ಶ್ಲೋಕ- 606-613)

**ಯೋಗ್ಯವಾದ ಆಸನವು ಉತ್ತಮಫಲ ನೀಡಬಲ್ಲದು-**

ಜಪ ಪೂಜೆಗಳನ್ನು ಕೇವಲ ಭೂಮಿಯಲ್ಲಿ ನಡೆಸುವುದು ದುಃಖಕ್ಕೆ ಕಾರಣವಾಗುವುದು. ಕಟ್ಟಿಗೆ, ಮಣೆ ಮುಂತಾದವುಗಳ ಮೇಲೆ ಕುಳಿತು ಜಪಮಾಡುವುದು ದಾರಿದ್ರ್ಯಕ್ಕೆ ಕಾರಣವಾಗುವುದು. ಹುಲ್ಲಿನ ಚಾಪೆಯಲ್ಲಿ ಕುಳಿತು ಜಪಿಸುವುದು ಕೀರ್ತಿಹಾನಿಗೆ ಕಾರಣವಾಗಿದೆ. ಎಲೆ ಮೇಲೆ ಕುಳಿತು ಜಪಿಸುವುದು ಅಮಂಗಲವು. ವಸ್ತ್ರದಮೇಲೆ ಕುಳಿತು ಜಪಿಸುವುದು ಪುಣ್ಯ ನಾಶಕವೆನಿಸಿದೆ. ಬಂಡೆಗಲ್ಲಿನಮೇಲೆ ಕುಳಿತು ಜಪಿಸುವುದು ರೋಗ ಜನಕವಾಗಿದೆ. ಪುಷ್ಪದಿಂದ ನಿರ್ಮಿಸಿದ ಆಸನ ಮತ್ತು ಕಂಬಳಿ ಮೇಲೆ ಕುಳಿತು ಜಪಿಸುವುದು ದುಃಖನಾಶಕವಾಗಿದೆ. ಕೃಷ್ಣಾಜಿನದ ಮೇಲೆ ಕುಳಿತುಕೊಳ್ಳುವುದು ಬ್ರಹ್ಮತೇಜೋವೃದ್ಧಿ, ಆಯುರ್ವೃದ್ಧಿ ಪ್ರಜ್ಞಾವೃದ್ಧಿ, ಕೀರ್ತಿ ಹಾಗು ಬಲವೃದ್ಧಿಗೆ ಕಾರಣವೆನಿಸಿದೆ. ಕುಳಿತುಕೊಳ್ಳುವ ಆಸನ, ಹಾಸಿಗೆ, ಬಟ್ಟೆ, ಹೆಂಡತಿ, ಮಗು ಮತ್ತು ಕಮಂಡಲು ಆಯಾವ್ಯಕ್ತಿಗೆ ಮಾತ್ರವೇ ಸೀಮಿತವಾಗಿದ್ದು ಶುದ್ಧವೆನಿಸುವವು. ಆಯಾವ್ಯಕ್ತಿಗಳಿಗೆ ಸೀಮಿತವಾದ ಈ ಪದಾರ್ಥಗಳನ್ನು ಬೇರೊಬ್ಬರು ಬಳಸಿದಲ್ಲಿ ಅಶುಚಿಯಾಗುತ್ತಾರೆ.

**ಋಷಿ ಛಂದಸ್ಸುಗಳ ಮನನ ಆವಶ್ಯಕ-**

ಯಾವುದೇ ಮಂತ್ರವನ್ನು ಜಪಿಸುವಾಗ ಅಂಗನ್ಯಾಸ, ಕರನ್ಯಾಸ, ಧ್ಯಾನ, ಋಷಿ, ದೇವತೆ, ಛಂದಸ್ಸುಗಳ ಸ್ಮರಣೆಯು ಅತ್ಯಂತ ಆವಶ್ಯಕವಾಗಿದೆ. ಅಂಗನ್ಯಾಸ,

ಕರನ್ಯಾಸಗಳನ್ನು ಮಾಡದಿರುವಲ್ಲಿ ಆಯುರ್ಹಾನಿಯಾಗುವುದು. ಧ್ಯಾನವನ್ನು ಸರಿಯಾಗಿ ಮಾಡದಿರುವಲ್ಲಿ ಜಪವು ನಿಷ್ಫಲವೆನಿಸುವುದು. ಋಷಿ, ಛಂದಸ್ಸು ದೇವತೆಗಳ ಸ್ಮರಣೆ ತೊರೆದಲ್ಲಿ ಭಯಂಕರವಾದ ರೋಗ, ವಿತ್ತನಾಶ, ದುಃಖಗಳು ಅರಸಿ ಬರುವವು. ಆದ್ದರಿಂದ ಆಯಾ ಮಂತ್ರವನ್ನು ಜಪಿಸುವಾಗ ಕ್ರಮದಿಂದ ಋಷಿ, ದೇವತೆ, ಛಂದಸ್ಸು ಅಂಗನ್ಯಾಸ, ಕರನ್ಯಾಸಗಳನ್ನು ನೆರವೇರಿಸಬೇಕು.

**ಗಾಯತ್ರೀನಾಮದ ವಿಷ್ಣುವಿನ ಅಪಾರ ಮಹಿಮೆ-**

ಗಾಯತ್ರೀ ಮಂತ್ರವು ವೇದಮಾತೆಯೆನಿಸಿದೆ. ಇದರ ಅನುಷ್ಠಾನವು ಮಹಾಪಾತಕಗಳ ಬಿಡುಗಡೆಗೆ ಕಾರಣವೆನಿಸಿದೆ. ಪಾರಾಶರ ಸ್ಮೃತಿಯ ಪ್ರಾಯಶ್ಚಿತ್ತ ಖಂಡವು ಹತ್ತು ಸಾವಿರ ಗಾಯತ್ರೀ ಮಂತ್ರ ಜಪವು ಎಲ್ಲ ಬಗೆಯ ಪಾಪಗಳಿಗೂ ಪ್ರಾಯಶ್ಚಿತ್ತವೆನ್ನುತ್ತದೆ

**ಸರ್ವೇಷಾಮೇವ ಪಾಪಾನಾಂ ಸಂಕರೇ ಸಮುಪಸ್ಥಿತೇ ।**
**ದಶಸಾಹಸ್ರಮಭ್ಯಸ್ಯ ಗಾಯತ್ರೀ ಶೋಧನಂ ಪರಮ್ ॥**

ಇಂತಹ ಗಾಯತ್ರಿಯ ನಾಲ್ಕು ಪಾದಗಳ ಮಹಿಮೆಯನ್ನು, ಇಪ್ಪತ್ನಾಲ್ಕು ಅಕ್ಷರಗಳ ಮಹಿಮೆಯನ್ನು ದೇವತೆಗಳು ಚೆನ್ನಾಗಿ ಬಲ್ಲರು. ಛಾಂದೋಗ್ಯ ಉಪನಿಷತ್ತು ಗಾಯತ್ರೀ ನಾಮಕ ಪರಮಾತ್ಮನು ನಾಲ್ಕು ಪಾದ ಉಳ್ಳವನು ಮತ್ತು ಆರು ಬಗೆಯ ರೂಪ ಉಳ್ಳವನೆಂದು ನಿರೂಪಿಸಿದೆ.

ಗಾಯತ್ರೀ ಮಂತ್ರದಲ್ಲಿ ಸನ್ನಿಹಿತನಾದ(ಪ್ರತಿಪಾದ್ಯನಾದ) ಗಾಯತ್ರೀನಾಮಕ ವಿಷ್ಣುವು ಸ್ತ್ರೀರೂಪಿಯಾಗಿದ್ದು ಸೂರ್ಯನಂತೆ ಕಾಂತಿ ಉಳ್ಳವನಾಗಿದ್ದಾನೆ. ಮತ್ಸ್ಯ ಕೂರ್ಮ ಮೊದಲಾದ ಅವತಾರ ರೂಪವು ಎರಡನೆಯ ರೂಪವೆನಿಸಿದೆ. ವಾಗಿಂದ್ರಿಯ ಮತ್ತು ಮಾತುಗಳಲ್ಲಿರುವ ಹಯಗ್ರೀವನಾಮಕ ಸ್ತ್ರೀ ರೂಪವು ವಿಷ್ಣುವಿನ ಮೂರನೆಯ ರೂಪವಾಗಿದೆ. ಭೂಮಿಯಲ್ಲಿರುವ ಹಳದಿ ಬಣ್ಣದ ಸ್ತ್ರೀರೂಪವು ನಾಲ್ಕನೆಯದೆನಿಸಿದೆ. ಜೀವರಲ್ಲಿ ವ್ಯಾಪ್ತವಾಗಿರುವ ಶರೀರನಾಮದ ರೂಪವು ಐದನೆಯದೆನಿಸಿದೆ. ಜೀವರೊಳಗೆ ಹೃದಯದಲ್ಲಿದ್ದು ಹೃದಯವೆನಿಸಿದ ರೂಪವು ಆರನೆಯದಾಗಿದೆ. ಹೀಗೆ ಗಾಯತ್ರೀ ನಾಮಕ ವಿಷ್ಣುವು ಆರು ರೂಪವುಳ್ಳವನು.

ಇದರಂತೆ ಗಾಯತ್ರೀ ಪ್ರತಿಪಾದ್ಯನಾದ ನಾರಾಯಣನು ಮೂರು ಸ್ವರೂಪಭೂತವಾದ ಪಾದ (ಅಂಶ) ಮತ್ತು ಒಂದು ಭಿನ್ನಾಂಶವೆಂಬುದಾಗಿ ನಾಲ್ಕು ಪಾದಗಳುಳ್ಳವನಾಗಿದ್ದಾನೆ. ಇಲ್ಲಿ ಪಾದ ಶಬ್ದವು ಅವನಿಂದ ಅಭಿನ್ನವಾದ ಆಕೃತಿ ಮತ್ತು ಭಿನ್ನವಾದ ಜೀವರನ್ನು ತಿಳಿಸುತ್ತದೆ. ಭಗವಂತನಿಂದ ಅಭಿನ್ನವಾದ ಮೂರು ಪಾದಗಳು (ರೂಪಗಳು) ಶ್ವೇತದ್ವೀಪ, ಅನಂತಾಸನ, ವೈಕುಂಠಗಳಲ್ಲಿರುವ ನಾರಾಯಣ ವಾಸುದೇವ ವೈಕುಂಠ ನಾಮಕರೂಪಗಳಾಗಿವೆ. ಪರಮಾತ್ಮನಿಂದ ಭಿನ್ನಾಂಶನಾದ ಜೀವನು ನಾಲ್ಕನೆಯ ಪಾದ ವೆನಿಸಿರುವನು.

ಇದರಂತೆ ಉಪನಿಷತ್ತಿನಲ್ಲಿರುವ ವಿಷ್ಣುವಿನ ಚತೂರೂಪತ್ವವನ್ನು ಇನ್ನೊಂದು ತೆರನಾಗಿ ವಿವರಿಸಬಹುದಾಗಿದೆ. ದೇಹದ ಒಳಹೊರಗೆ ವ್ಯಾಪ್ತವಾದ ಬ್ರಹ್ಮನಾಮಕ ರೂಪವು ಗಾಯತ್ರೀ ನಾಮಕ ವಿಷ್ಣುವಿನ ಮೊದಲ ರೂಪವೆನಿಸಿದೆ. ಎಲ್ಲಡೆ ವ್ಯಾಪ್ತವಾದ ರೂಪವೇ ಜೀವಸ್ವರೂಪದ ಹೊರಗೆ ಜಡಹೃದಯದಲ್ಲಿ ಪ್ರಕಾಶಮಾನವಾಗಿದ್ದು ಆಕಾಶನಾಮಕವಾಗಿದೆ. ಇದು ಎರಡನೆ ರೂಪವೆನಿಸಿದೆ. ಜೀವ ಸ್ವರೂಪದ ಜಡ ಹೃದಯದಲ್ಲಿ ಪ್ರಕಾಶಮಾನವಾಗಿರುವ ಈ ರೂಪವೇ ಜೀವಸ್ವರೂಪದೇಹದಲ್ಲಿ ವ್ಯಾಪಿಸಿಕೊಂಡಿದ್ದು ಮೂರನೆಯ ರೂಪವೆನಿಸಿದೆ. ಜೀವರಲ್ಲಿ ವ್ಯಾಪ್ತವಾದ ಈ ರೂಪವೇ ಜೀವ ಸ್ವರೂಪದೇಹದ ಹೃದಯದಲ್ಲಿ ವ್ಯಾಪಿಸಿದ್ದು ಪ್ರಕಾಶಮಾನವಾಗಿ ನಾಲ್ಕನೆಯ ರೂಪವೆನಿಸಿದೆ. ಇಂತಹ ನಾಲ್ಕು ರೂಪಗಳೂ ದೇಶ-ಕಾಲಗುಣಗಳ ಎಲ್ಲೆಯನ್ನು ಮೀರಿನಿಂತಿವೆ. ಇದನ್ನು ಉಪಾಸಿಸುವವರು ಸಂಸಾರ ಮತ್ತು ಮುಕ್ತಿಗಳಲ್ಲಿ ಯೋಗ್ಯತಾನುಗುಣವಾದ ಸಂಪತ್ತನ್ನು ಪಡೆಯುವರು (ಶ್ಲೋ. 655-663)

**ಔಪಾಸನ ತ್ಯಾಗ ಸಲ್ಲದು-**

ವಿವಾಹದ ಮೂಲ ಉದ್ದೇಶವು ಔಪಾಸನ ಮೊದಲಾದ ಹೋಮಗಳನ್ನು ನಡೆಸುವುದು ಹಾಗು ಧಾರ್ಮಿಕ ಸಂತತಿಯನ್ನು ಮುಂದುವರಿಸುವುದಾಗಿದೆ. ವಿವಾಹ ಸಂಸ್ಕಾರವನ್ನು ಹೊಂದಿದವನು ಔಪಾಸನ ಹೋಮವನ್ನು ನಡೆಸದಿರುವಲ್ಲಿ ಇಪ್ಪತ್ತೆಂಟು ನರಕಗಳಿಗೆ ಗುರಿಯಾಗುವನು. ಬ್ರಹ್ಮಹತ್ಯಾದಿ ಮಹಾಪಾತಕಗಳಿಗೆ ಪ್ರಾಯಶ್ಚಿತ್ತವನ್ನು ಹೇಳಬಹುದಾದರೂ ಅಗ್ನಿಯನ್ನು ತ್ಯಜಿಸಿದವನಿಗೆ ಪ್ರಾಯಶ್ಚಿತ್ತವಿರುವುದಿಲ್ಲ. 12 ದಿನ ಅಗ್ನಿಯನ್ನು ತೊರೆದವನು

ಮೂರು ದಿನ ಸಂಧ್ಯೆಯನ್ನು ತ್ಯಜಿಸಿದವನು, ನಾಲ್ಕು ವೇದಗಳಲ್ಲಿ ಪಾರಂಗತನಾದರೂ ಮತ್ತೆ ಉಪನಯನಾದಿ ಸಂಸ್ಕಾರ ಪಡೆದುಕೊಳ್ಳುವುದು ಆವಶ್ಯಕವೆನಿಸುವುದು. ಆದುದರಿಂದ ವಿವಾಹ ಸಂಸ್ಕಾರದ ನಂತರ ಒಂದು ದಿನವೂ ಅಗ್ನಿಯನ್ನು ತ್ಯಜಿಸುವಂತಿಲ್ಲ. ಹಾಗೆ ತ್ಯಜಿಸಿದಲ್ಲಿ ದ್ವಿಜನು ಪತಿತನೆನಿಸುವನು. ಕೆಲವು ಆಪತ್ತಿನ ಪ್ರಸಂಗಗಳಲ್ಲಿ ಅಗ್ನಿತ್ಯಾಗಕ್ಕೆ ಪ್ರಾಯಶ್ಚಿತ್ತವನ್ನು ಹೇಳಲಾಗಿದೆ. ಅದನ್ನು ಗಮನಿಸಿ ಅಗ್ನಿ ಮುಖದಿಂದ ಭಗವದಾರಾಧನೆಯನ್ನು ನಡೆಸಬೇಕು.

**ವಿಧುರಾಗ್ನಿ ಸಂಧಾನ**

ವೇದಶಾಸ್ತ್ರಗಳನ್ನು ಅಭ್ಯಾಸಮಾಡಿದ ದ್ವಿಜನ ಪತ್ನಿಯು ಮೃತಳಾದರೆ ಅವನು ವಿಧುರನೆನಿಸುವನು. ಪತ್ನಿಯನ್ನು ಕಳೆದುಕೊಂಡಾಗ ಅಗ್ನಿಮುಖದಿಂದ ಭಗವದಾರಾಧನೆಗೆ ಅವನು ಅನಧಿಕಾರಿಯಾಗುವನು. ಆದರೂ ಅಗ್ನಿಸಂಧಾನವನ್ನು ನಡೆಸಿ ಲಾಜಹೋಮದವರೆಗಿನ ವಿಧಿಗಳನ್ನು ನೆರವೇರಿಸಿ 'ಅಯಾಶ್ಚಾಗ್ನೆ ', 'ಅತೋ ದೇವಾಃ', 'ಇದಂ ವಿಷ್ಣುಃ', 'ಸಪ್ತವಾ' ಎಂಬ ಮಂತ್ರಗಳಿಂದ ಲಾಜ ಹೋಮವನ್ನು ನಡೆಸಬೇಕು. ಇದರಂತೆ

**'ಶುಚೀ ವೋ' 'ಯದಂತಿ ಯಚ್ಚ ದೂರಕೇ' ।**
**'ತಂತು ತನ್ವನ್' ವೇತ್ಥ ಹಿ ವೇದೋ ಅಧ್ವನಃ' 'ಆದೇವಾನಾಮ್' ॥**

ಎಂಬ ಮಂತ್ರಗಳಿಂದ ಹೋಮವನ್ನು ನಡೆಸಬೇಕು. ಹೀಗೆ ಈ ಕೃತಿಯಲ್ಲಿ ನಿರೂಪಿಸಿದ ಕ್ರಮದಂತೆ ಅಗ್ನಿ ರಕ್ಷಣೆಯನ್ನು ಮಾಡಿಕೊಳ್ಳುವುದು ವಿಪ್ರನ ಅವಶ್ಯ ಕರ್ತವ್ಯವಾಗಿದೆ. ಯಾವ ವಿಪ್ರನಿಗೆ ಯೋಗ್ಯ ಮಕ್ಕಳಿರುವರೋ ಅವನು ವಿಧುರನೆನಿಸನು. ವಿದ್ಯೆ ಎಂಬ ಪತ್ನಿ ತಪಸ್ಸೆಂಬ ಅಗ್ನಿ ಇರುವವನಿಗೆ ಎಲ್ಲಿಯ ವೈಧುರ್ಯ. ದರ್ಭೆಯಿಂದ ಪತ್ನಿಯ ಪ್ರತಿಕೃತಿಯನ್ನು ನಿರ್ಮಿಸಿ ಬದುಕಿನ ಕೊನೆಯ ಕ್ಷಣದ ವರೆಗೆ ಅಗ್ನಿ ಹೋತ್ರವನ್ನು ನಡೆಸಬೇಕು. ವಿವಾಹ ಸಂಸ್ಕಾರವು ಪಶುಗಳಂತೆ ಕೇವಲ ಸ್ವಚ್ಛಂದ ಭೋಗಕ್ಕಾಗಿ ವಿಹಿತವಾಗಿರದೆ ಪುಣ್ಯ ಸಂತತಿ, ಧರ್ಮ ಸಂತತಿಯ ಅಭಿವೃದ್ಧಿಗಾಗಿಯೇ ವಿಹಿತವಾಗಿದೆ.

**ಭೂಮಿಗೆ ಗೋಮಯ ಲೇಪನ ಏಕೆ?**

ಭೂಮಿಯು ಎಲ್ಲ ರತ್ನಗಳ ಆಕರವು, ತೀರ್ಥಗಳ ನೆಲೆಯು. ಔಷಧಿ

ವನಸ್ಪತಿಗಳ ಆಸರೆಯು ಆಗಿದ್ದು ಪವಿತ್ರವೆನಿಸಿದೆ. ಆದರೂ ಆಯಾಕಾಲದಲ್ಲಿ ಉಂಟಾಗುವ ಹಿಂಸೆ, ಅಮಂಗಳ ವಸ್ತುಗಳ ಸಂಪರ್ಕದಿಂದ ಭೂಮಿಯು ಮಲಿನವಾಗುವುದು. ಇಂಥಹ ಪ್ರಸಂಗದಲ್ಲಿ ಲಕ್ಷ್ಮೀದೇವಿಯ ಸನ್ನಿಧಾನವುಳ್ಳ ಗೋಮಯದ ಲೇಪನವು ಭೂಮಿಯಲ್ಲಿರುವ ನೈಸರ್ಗಿಕವಾದ ಪಾವಿತ್ರ್ಯವನ್ನು ಜಾಗೃತ ಗೊಳಿಸುವುದು.

**ಸಾಟಿ ಇಲ್ಲದ ತುಳಸಿ**

'ತುಳಸಿ ಇಲ್ಲದ ಪೂಜೆ ಒಲ್ಲನೋ ಶ್ರೀಹರಿ' ಎಂಬ ನಾಣ್ಣುಡಿಯಂತೆ ಹರಿ ಪೂಜೆಗೆ ತುಳಸಿಯು ಅತ್ಯಂತ ಆವಶ್ಯಕವಾಗಿದೆ. ತುಳಸಿಯನ್ನು ನೋಡಿದಾಗ ನಮ್ಮೆಲ್ಲ ಪಾಪಗಳು ನಾಶಹೊಂದುವವು. ಸ್ಪರ್ಶಿಸಿದಾಗ ಕಾಯ ಪಾವನಗೊಳ್ಳುವುದು. ನಮಿಸಿದಾಗ, ಅವಳ ಕರುಣೆಯಿಂದ ರೋಗ ನಿವಾರಣೆಯಾಗುವುದು. ತುಳಸಿಯ ಪಾದಕ್ಕೆ ನೀರೆರೆದರೆ ಮೃತ್ಯುವಿನ ಭಯದಿಂದ ಬಿಡುಗಡೆ ನೀಡುವಳು. ಶ್ರದ್ಧೆಯಿಂದ ಬೆಳೆಸಿ, ಶ್ರೀಕೃಷ್ಣನ ಪಾದಕ್ಕೆ ಸಮರ್ಪಿಸಿದರೆ ಮುಕ್ತಿ ಫಲ ಕೊಡುವಳು. ಎಲ್ಲಿ ತುಳಸಿಯ ವನವಿದೆಯೋ ಅಲ್ಲಿ ಪುಷ್ಕರ ಮತ್ತು ಗಂಗಾದಿಸಕಲ ತೀರ್ಥಗಳ ಸನ್ನಿಧಾನವು ಜಾಗೃತವಾಗಿರುವುದು.

ತುಳಸಿಯ 1. ದರ್ಶನ, 2. ಸ್ಪರ್ಶನ, 3. ಧ್ಯಾನ, 4. ನಮನ, 5. ಕೀರ್ತನ, 6. ವಾರ್ತಾಶ್ರವಣ 7. ನೆಡುವುದು 8. ಸಂಚಯನ 9. ಪೂಜಿಸುವುದು. ಹೀಗೆ ಒಂಬತ್ತು ಬಗೆಯಿಂದ ತುಳಸಿಯ ಭಕ್ತಿಯನ್ನು ಯಾರು ಮಾಡುತ್ತಾರೋ ಅವರು ಹರಿಯ ಮಂದಿರದಲ್ಲಿ ವಾಸಿಸುವರು. ಯಮನ ಪುಸ್ತಕಗಳಲ್ಲಿ ದಾಖಲಾದ ನಾನಾ ಬಗೆಯ ಪಾಪಗಳು ತುಳಸಿಯ ವನದರ್ಶನದಿಂದ ವಿನಾಶ ಹೊಂದುವವು. ತುಳಸಿಯ ವನದರ್ಶನವು ಅನೇಕ ಗೋದಾನಗಳ ಫಲವನ್ನು ದೊರಕಿಸಿಕೊಡುವುದು. ಶ್ರೀಹರಿಯ ಪೂಜೆಗೆ ತುಳಸಿಯ ದಳವಿದ್ದರೆ ಉತ್ತಮ. ಅದಿಲ್ಲವಾದರೆ ಚಿಗುರೆಲೆಯು ಗ್ರಾಹ್ಯ. ಅದೂ ದೊರಕದಲ್ಲಿ ತುಳಸಿಯ ಎಲೆಯಿಂದ ಪೂಜಿಸಬಹುದು. ಅದೂ ಇಲ್ಲವಾದರೆ ತುಳಸಿಯ ಕಾಷ್ಠದಿಂದ, ಪೂಜೆ ನಡೆಸಬಹುದು. ಅದು ದೊರೆಯದಿದ್ದಲ್ಲಿ ತುಳಸಿಯ ಬೇರು ಸ್ವೀಕಾರ್ಯವೆನಿಸುವುದು. ಅದೂ ದೊರೆಯದಿದ್ದಲ್ಲಿ ತುಳಸಿಯ ಮೃತ್ತಿಕೆಯೂ ಸ್ವೀಕಾರಾರ್ಹವಾಗಿದೆ. ಅದಿಲ್ಲದಿದ್ದರೆ ತುಳಸಿಯ ಶಬ್ದೋಚ್ಚಾರಣೆಯು

ಹರಿಪೂಜೆಗೆ ಕಾರಣವಾಗಬಲ್ಲದು. ಯಾರು ಭಗವಂತನ ತಲೆಯ ಮೇಲೆ ತುಳಸಿ ಕಾಷ್ಠದ ಗಂಧವನ್ನು ಅರ್ಪಿಸಿ ತಮ್ಮ ದೇಹವನ್ನು ಅದರಿಂದ ಅಲಂಕರಿಸಿಕೊಳ್ಳುವರೋ ಅಂತಹ ಸುಜನರು ತೀರ್ಥಕೋಟಿ ಸಂಚಾರದ ಫಲವನ್ನು ಪಡೆಯುವರು. ಯಾರು ಹರಿಯ ಪಾದಗಳಿಗೆ ತುಳಸೀ ಪತ್ರವನ್ನು ಸಮರ್ಪಿಸುವರೋ ಅವರು ಉತ್ತಮ ಸದ್ಗತಿಯನ್ನು ಪಡೆಯುವರು. ಯಾರು ಮೂರು ದಳ ತುಳಸಿಯನ್ನು ಹರಿಯ ಪಾದಗಳಿಗೆ ಸಮರ್ಪಿಸುವರೋ ಅವರ ಪುಣ್ಯವನ್ನು ವರ್ಣಿಸಲುಸಾಧ್ಯವಿಲ್ಲ. ತಂದೆತಾಯಿ ಗುರುಗಳು ಇವರಿಗೆ ಮಂಗಲ ಅಥವಾ ಸದ್ಗತಿಯನ್ನು ಬಯಸಿ ವಿಷ್ಣುವಿಗೆ ತುಳಸಿಯನ್ನು ಅರ್ಪಿಸಿದಲ್ಲಿ ಪಾಪ ಸಮೂಹದಿಂದ ಬಿಡುಗಡೆ ಹೊಂದುವರು. ತಾವು ತುಳಸಿಯಿಂದ ಶ್ರೀಹರಿಯನ್ನು ಅರ್ಚಿಸುವುದರ ಜೊತೆಗೆ ಇನ್ನೊಬ್ಬ ಸುಜನರು ಅರ್ಚನೆ ನಡೆಸುವಾಗ ಅದಕ್ಕಾಗಿ ಯಾರು ಒಂದು ಲಕ್ಷ ತುಳಸಿದಳವನ್ನು ತಂದುಕೊಡುವರೊ ಅವರು ವೈಕುಂಠವನ್ನೇ ಪಡೆಯುವರು. ಬೇರೆಲ್ಲ ಪುಷ್ಪಗಳಿಂದ ಪೂಜಿಸುವಾಗಲೂ ತುಳಸಿಯು ಜೊತೆಗಿರುವುದು ಭೂಷಣವೆನಿಸಿದೆ.

**ಪಂಚಾಮೃತಾಭಿಷೇಕದ ಮಹತ್ವ**

ಶ್ರೀಹರಿಗೆ ನಿತ್ಯ ಪಂಚಾಮೃತಾಭಿಷೇಕವನ್ನು ನಡೆಸುವುದು ಮಹಾ ಪುಣ್ಯಸಾಧನವಾಗಿದೆ. ಗೋಮಾತೆಯ ಉತ್ಪನ್ನಗಳಾದ ಕ್ಷೀರದಲ್ಲಿ ಗೋವಿಂದನನ್ನು ಮೊಸರಿನಲ್ಲಿ ವಾಮನನನ್ನು ತುಪ್ಪದಲ್ಲಿ ವಿಷ್ಣು ರೂಪವನ್ನು ಚಿಂತಿಸಬೇಕು. ಜೇನು ತುಪ್ಪದಲ್ಲಿ ಮಧುಸೂದನನನ್ನು, ಸಕ್ಕರೆಯಲ್ಲಿ ಅಚ್ಯುತನನ್ನು ಚಿಂತಿಸಬೇಕು. ತುಳಸೀದಳದಿಂದ ಕೂಡಿದ ಶಂಖೋದಕದಿಂದ ಪೂಜಾ ದ್ರವ್ಯಗಳನ್ನು ಪ್ರೋಕ್ಷಿಸಿ ಶ್ರೀಹರಿಗೆ ಸ್ನಾನವನ್ನು ಮಾಡಿಸಬೇಕು.

ಹಾಲಿಗಿಂತ ಮೊಸರಿನಿಂದ ಅಭಿಷೇಕ ನಡೆಸುವುದು ಹತ್ತು ಪಟ್ಟು ಪುಣ್ಯಕ್ಕೆ ಕಾರಣವಾಗಿದೆ. ಅದಕ್ಕಿಂತಲೂ ತುಪ್ಪದಿಂದ ಅಭಿಷೇಕ ಮಾಡುವುದು ಹತ್ತು ಪಟ್ಟು ಹೆಚ್ಚಿನ ಪುಣ್ಯಕ್ಕೆ ಕಾರಣವಾಗಿದೆ. ತುಪ್ಪಕ್ಕಿಂತ ಕಬ್ಬಿನ ಹಾಲಿನ ಅಭಿಷೇಕವು ಹತ್ತು ಪಟ್ಟು ಹೆಚ್ಚು ಪುಣ್ಯವನ್ನು ದೊರಕಿಸಿಕೊಡುತ್ತದೆ. ಸ್ವಾದೂದಕ ಅಭಿಷೇಕವು ಕಬ್ಬಿನ ಹಾಲಿನ ಅಭಿಷೇಕಕ್ಕಿಂತ ಹತ್ತು ಪಟ್ಟು ಪುಣ್ಯವನ್ನು ಹೆಚ್ಚಿಸಬಲ್ಲದು.

ಕರುಣಾಮಯನಾದ ಶ್ರೀಹರಿಯು ನೀರಿನಿಂದಲಾದರೂ ಅಭಿಷೇಕ ಮಾಡುವ ಭಕ್ತನ ಹತ್ತು ಅಪರಾಧಗಳನ್ನು ಮನ್ನಿಸುವನು. ಹಾಲಿನಿಂದ ಅಭಿಷೇಕ ಮಾಡುವವನ ನೂರು ಪಾಪಗಳನ್ನು ಕಳೆಯುವನು. ಮೊಸರಿನಿಂದ ಅಭಿಷೇಕ ಮಾಡುವವನು ಸಾವಿರ ಪಾಪವನ್ನು ಕಳೆದುಕೊಳ್ಳುವನು. ತುಪ್ಪದಿಂದ ಅಭಿಷೇಕ ಮಾಡುವವನು ಹತ್ತು ಸಾವಿರ ಪಾಪಗಳನ್ನು ಕಳೆದುಕೊಳ್ಳುವನು. ಜೇನುತುಪ್ಪದಿಂದ ಅಭಿಷೇಕ ಮಾಡುವವನು ಒಂದು ಲಕ್ಷ ಪಾಪಗಳನ್ನು ಕಳೆದುಕೊಳ್ಳುವನು. ಕಬ್ಬಿನ ಹಾಲಿನಿಂದ ಅಭಿಷೇಕವನ್ನು ನಡೆಸುವನು ಹತ್ತು ಲಕ್ಷ ಪಾಪಗಳನ್ನು ಕಳೆದು ಕೊಳ್ಳುವನು. ಎಳನೀರಿನಿಂದ ಅಭಿಷೇಕ ನಡೆಸುವವನು ಕೋಟಿ ಪಾಪಗಳನ್ನು ಕಳೆದುಕೊಳ್ಳುವನು. ಗಂಧೋದಕದಿಂದ ಅಭಿಷೇಕ ಮಾಡುವವನು ಅನಂತ ಪಾಪವನ್ನು ಕಳೆದುಕೊಳ್ಳುವನು. ಈ ಅಂಶವನ್ನು ಸಾಧಕರು ಗಮನದಲ್ಲಿರಿಸಿಕೊಂಡು ಭಗವಂತನ ಪೂಜೆಯನ್ನು ನಡೆಸಬೇಕು.

**ಅನೇಕ ಬಾರಿ ಶಂಖದಿಂದ ಅಭಿಷೇಕ**

ನಾವು ಪೂಜೆ ನಡೆಸುವಾಗ ಒಂದೆರಡು ಬಾರಿಗೆ ಶಾಲಿಗ್ರಾಮಗಳಿಗೆ ಶಂಖದಿಂದ ಅಭಿಷೇಕಮಾಡುತ್ತೇವೆ. ಮಹಾಕಲಶದಲ್ಲಿರುವ ನೀರನ್ನು ಒಂದೇ ಬಾರಿಗೆ ದೇವರ ತಲೆಯ ಮೇಲೆ ಸುರಿದು ಅಭಿಷೇಕದ ಕಾರ್ಯವನ್ನು ಪೂರ್ಣಗೊಳಿಸುತ್ತೇವೆ. ಆದರೆ ಶಂಖದಿಂದ ಸಾವಕಾಶವಾಗಿ ಅನೇಕ ಬಾರಿಗೆ ಅಭಿಷೇಕ ನಡೆಸಿದಲ್ಲಿ ಮಹಾಫಲವನ್ನು ಪಡೆದುಕೊಳ್ಳುತ್ತೇವೆ. ಯಾರು ಎಂಟು ಬಾರಿಗೆ ಶಂಖದಿಂದ ಅಭಿಷೇಕ ನಡೆಸುವರೋ ಅವರು ಕ್ರಮವಾಗಿ ಭಗವಂತನ ಲೋಕವನ್ನು ಪಡೆಯುತ್ತಾರೆ. ಹದಿನಾರು ಬಾರಿಗೆ ಶಂಖದಿಂದ ಅಭಿಷೇಕ ನಡೆಸುವವರು ಎಲ್ಲ ಪಾಪಗಳನ್ನು ಕಳೆದುಕೊಂಡು ಸ್ವರ್ಗವನ್ನು ಪಡೆಯುವರು. ಇಪ್ಪತ್ನಾಲ್ಕು ಬಾರಿ ಶಂಖದಿಂದ ಶ್ರೀಹರಿಗೆ ಸ್ನಾನ ಮಾಡಿಸುವವನು ಇಂದ್ರಲೋಕದಲ್ಲಿ ಬಹುಕಾಲ ಇದ್ದು ಅನಂತರ ರಾಜನಾಗಿ ಜನಿಸುವವನು. ಯಾರು ನೂರೆಂಟು ಬಾರಿ ಶಂಖದಿಂದ ಅಭಿಷೇಕಮಾಡುವರೋ ಅಂತಹ ಸುಜನರು ನೂರೆಂಟು ಬಾರಿ ಸುವರ್ಣವನ್ನು ಅರ್ಪಿಸಿದ ಫಲವನ್ನು ಪಡೆಯುವರು. ಐನೂರು ಬಾರಿ ಶಂಖದಿಂದ ಅಭಿಷೇಕ ನಡೆಸುವನು ತನ್ನೊಡನೆ ಪಿತೃಗಳಿಗೂ ಉತ್ತಮಗತಿಯನ್ನು ದೊರಕಿಸಿಕೊಡುವನು. ಸಾವಿರದ ಎಂಟು ಬಾರಿಗೆ

ಶಂಖದಿಂದ ಸ್ನಾನ ಮಾಡಿಸುವವನು ತನ್ನ ಆಶ್ರಿತರೊಂದಿಗೆ ಮುಕ್ತಿಯನ್ನು ನಿಶ್ಚಿತವಾಗಿ ಪಡೆಯುವನು. ಈ ಅಂಶವನ್ನು ಗಮನದಲ್ಲಿರಿಸಿ ಕೊಂಡು ಹೆಚ್ಚು ಶ್ರದ್ಧಾ ಭಕ್ತಿಯಿಂದ ಪ್ರತಿನಿತ್ಯವೂ ಶಂಖದಿಂದ ಅನೇಕ ಬಾರಿ ಅಭಿಷೇಕವನ್ನು ನಡೆಸಬೇಕು.

**ನೈವೇದ್ಯ ಸಮರ್ಪಣ - ಅನುಸಂಧಾನ**

ಶ್ರೀಹರಿಯ ಮುಂಭಾಗದಲ್ಲಿ ಚತುಷ್ಕೋಣಾಕಾರವಾದ ಮಂಡಲವನ್ನು ಮಾಡಿ ಶ್ರೀ ಬೀಜವನ್ನು ಬರೆದು ಅನ್ನ ಮಾಡಿದ ಪಾತ್ರೆ ಇತರ ನೈವೇದ್ಯ ವಸ್ತುಗಳನ್ನು ಇಡಬೇಕು. ವಿಷ್ಣುಗಾಯತ್ರೀ, ನಾರಾಯಣ ಅಷ್ಟಾಕ್ಷರ ಹಾಗೂ ಗಾಯತ್ರೀಮಂತ್ರದಿಂದ ಅಭಿಮಂತ್ರಿಸಿದ ಜಲವನ್ನು ನೈವೇದ್ಯ ಪದಾರ್ಥಗಳಿಗೆ ಪ್ರೋಕ್ಷಿಸಬೇಕು. ಶಂಖದಲ್ಲಿ ಜಲವನ್ನು ಅಭಿಮಂತ್ರಿಸಿ ಪ್ರೋಕ್ಷಿಸುವ ಕ್ರಮವು ಇದೆ. ನೈವೇದ್ಯ ಪದಾರ್ಥಗಳ ಮೇಲೆ ತುಳಸೀ ದಳವನ್ನಿಟ್ಟು ಧೇನು ಮುದ್ರೆಯನ್ನು ಪ್ರದರ್ಶಿಸಬೇಕು. ಅಶ್ವಿನೀ ದೇವತೆಗಳಲ್ಲಿ ನಿಯಾಮಕರಾಗಿರುವ ರಾಮಕೃಷ್ಣರು ಅಮೃತಸ್ರಾವಿಯಾದ ತಮ್ಮ ದೃಷ್ಟಿಯಿಂದ ಭೋಜ್ಯವಸ್ತುಗಳನ್ನು ಪವಿತ್ರಗೊಳಿಸಿರೆಂದು ಪ್ರಾರ್ಥಿಸಬೇಕು. ಸ್ವರ್ಗದಲ್ಲಿರುವ ಕಾಮಧೇನು ಭೋಜ್ಯ ವಸ್ತುಗಳಮೇಲೆ ಅಮೃತವನ್ನು ಸುರಿಸಲೆಂದು ಪ್ರಾರ್ಥಿಸಿ ಧೇನು ಮಂತ್ರವನ್ನು ಜಪಿಸಬೇಕು. ರಮಾಬ್ರಹ್ಮಾದಿ ದೇವತೆಗಳಿಂದ ಸೇವ್ಯನಾದ ಶ್ರೀಹರಿಯು ರತ್ನ ಪೀಠದಲ್ಲಿ ಸನ್ನಿಹಿತನಾಗಿರುವನೆಂದು ಚಿಂತಿಸಬೇಕು. ಸರಸ್ವತೀ ಭಾರತಿಯರಿಂದ ಕೂಡಿದ ಲಕ್ಷ್ಮೀದೇವಿಯು ಶ್ರೀಹರಿಗೆ ಮಂಗಳ ಸ್ನಾನ ಮಾಡಿಸುವಳೆಂದು ಚಿಂತಿಸಬೇಕು. ಗರುಡನು ಪೀತಾಂಬರವನ್ನು ಶೇಷದೇವನು ಆಸನವನ್ನು, ಇಂದ್ರನು ಕಳಶವನ್ನು, ಮನ್ಮಥನು ಗೋಪೀ ಚಂದನವನ್ನು, ಸೂರ್ಯಚಂದ್ರರು ಚಂದನವನ್ನು, ಶ್ರೀಗಂಧವನಮಾಲಾ ವೈಜಯಂತಿ ಮೊದಲಾದ ದಿವ್ಯಾಭರಣಗಳನ್ನು ರಮೆಯು ಸಮರ್ಪಿಸುತ್ತಿರುವಳೆಂದು ಚಿಂತಿಸಬೇಕು. ಚತುರ್ಮುಖನು ಕೌಸ್ತುಭವನ್ನು, ಪ್ರಾಣದೇವನು ಚೂಡಾಮಣಿಯನ್ನು, ಶೇಷನು ಕರ್ಣಕುಂಡಲವನ್ನು ಸಮರ್ಪಿಸುತ್ತಿರುವ ನೆಂದು ಚಿಂತಿಸಬೇಕು. ಶ್ರೀಹರಿಯ ನೈವೇದ್ಯಕ್ಕಾಗಿ ಸರಸ್ವತೀ ದೇವಿಯು ಅನ್ನವನ್ನು, ಚತುರ್ಮುಖನು ತೊವ್ವೆಯನ್ನು, ಮಹಾಲಕ್ಷ್ಮೀಯು ತುಪ್ಪವನ್ನು, ಪರಮಾನ್ನವನ್ನು ಭಾರತಿಯು , ಭಕ್ಷ್ಯಗಳನ್ನು

ವಾಯುದೇವರು, ಇಂದ್ರ, ಶಚಿ ಮೊದಲಾದವರು ಇತರ ಭೋಜ್ಯ ಪದಾರ್ಥಗಳನ್ನು ಸಿದ್ಧಪಡಿಸುವರೆಂದು ಚಿಂತಿಸಬೇಕು. ಅಗ್ನಿ ಕೋಣದಲ್ಲಿ ಭಕ್ಷ್ಯವನ್ನು ಈಶಾನ್ಯದಲ್ಲಿ ಪಾಯಸವನ್ನು ನೈಋತ್ಯ ದಿಕ್ಕಿನಲ್ಲಿ ಲೇಹ್ಯಪೇಯಗಳನ್ನು ವಾಯವ್ಯ ದಿಕ್ಕಿನಲ್ಲಿ ಉಪಸ್ಕರಗಳನ್ನು ಮಧ್ಯಭಾಗದಲ್ಲಿ ಅನ್ನವನ್ನು ಸಮರ್ಪಣೆಗಾಗಿ ಇರಿಸಬೇಕು. ಅದರ ಜೊತೆಗೆ ಘೃತಪಾತ್ರೆಯನ್ನು ಇಡಬೇಕು. ಅನ್ನ ಮೊದಲಾದ ಪದಾರ್ಥಗಳಲ್ಲಿ ಚಿಂತಿಸಬೇಕಾದ ಭಗವಂತನ ರೂಪಗಳು ಇಂತಿವೆ-

| ಪದಾರ್ಥ | ಅಭಿಮಾನಿದೇವತೆ | ಭಗವದ್ರೂಪ |
|---|---|---|
| 1. ಅನ್ನ | ಚಂದ್ರ | ಕೇಶವ |
| 2. ಪರಮಾನ್ನ | ಭಾರತೀ | ನಾರಾಯಣ |
| 3. ಭಕ್ಷ್ಯಗಳು | ಸೂರ್ಯ | ಮಾಧವ |
| 4. ಘೃತ | ಲಕ್ಷ್ಮೀ | ಗೋವಿಂದ |
| 5. ಕ್ಷೀರ | ಸರಸ್ವತೀ | ವಿಷ್ಣು |
| 6. ಮಂಡಿಗೆ | ಬ್ರಹ್ಮದೇವರು | ಮಧುಸೂದನ |
| 7. ನವನೀತ | ವಾಯು | ತ್ರಿವಿಕ್ರಮ |
| 8. ದಧಿ | ಸೋಮ, ವರುಣರು | ವಾಮನ |
| 9. ಸೂಪ | ಗರುಡ | ಶ್ರೀಧರ |
| 10. ಸೊಪ್ಪುಗಳು | ಮಿತ್ರ (ಸೂರ್ಯ) | ಹೃಷೀಕೇಶ |
| 11. ತರಕಾರಿ | ಶೇಷ | ಪದ್ಮನಾಭ |
| 12. ಆಮ್ಲ (ಹುಳಿ) | ಗೌರೀ, ಸುಪರ್ಣೀ | ದಾಮೋದರ |
| 13. ಅನಾಮ್ಲ | ರುದ್ರ | ಸಂಕರ್ಷಣ |
| 14. ಸಕ್ಕರೆ, ಬೆಲ್ಲ | ಇಂದ್ರ | ವಾಸುದೇವ |
| 15. ವ್ಯಂಜನ ಪದಾರ್ಥಗಳು | ಬೃಹಸ್ಪತಿ | ಪ್ರದ್ಯುಮ್ನ |
| 16. ಕಟುದ್ರವ್ಯ | ಯಮ | ಅನಿರುದ್ಧ |

| | | | |
|---|---|---|---|
| 17. | ಇಂಗು, ಏಲಕ್ಕಿ, ಸಾಸಿವೆ, ಶ್ರೀಖಂಡ, ಕರ್ಪೂರ | ಮನ್ಮಥ | ಪುರುಷೋತ್ತಮ |
| 18. | ಚೋಷ್ಯಪದಾರ್ಥ, ಕರಿದ ಪದಾರ್ಥಗಳು | ಜಯಂತ | ಅಧೋಕ್ಷಜ |
| 19. | ಎಳ್ಳು, ಕುಂಬಳ, ಉದ್ದು | ದಕ್ಷ | ನರಸಿಂಹ |
| 20. | ಉದ್ದಿನ ಭಕ್ಷ್ಯಗಳು | ಸ್ವಾಯಂಭುವಮನು | ಅಚ್ಯುತ |
| 21. | ಲವಣ | ನಿರ್ಋತಿ | ಜನಾರ್ದನ |
| 22. | ಹಣ್ಣು ಹಣ್ಣಿನರಸ | ಆಹಂಕಾರಿಕ ಪ್ರಾಣ | ಉಪೇಂದ್ರ |
| 23. | ತಾಂಬೂಲ | ದುರ್ಗಾ | ಹರಿ |
| 24. | ಸ್ವಾದೂದಕ | ಬುಧ | ಶ್ರೀಕೃಷ್ಣ |

ಇದಲ್ಲದೆ ವಾಸುದೇವನು ಅನ್ನದಲ್ಲಿಯೂ, ಸಂಕರ್ಷಣನು ಭಕ್ಷ್ಯದಲ್ಲಿಯೂ, ಪ್ರದ್ಯುಮ್ನನು ಪರಮಾನ್ನದಲ್ಲಿಯೂ, ಅನಿರುದ್ಧನು ತುಪ್ಪದಲ್ಲಿಯೂ, ನಾರಾಯಣನು ಎಲ್ಲ ಪದಾರ್ಥಗಳಲ್ಲಿಯೂ ಇರುವನೆಂದು ಚಿಂತಿಸಬೇಕು. ಶ್ರೀಹರಿಯೇ ಭೋಜ್ಯ ವಸ್ತುಗಳಲ್ಲಿ ಭೋಕ್ತೃಗಳಲ್ಲಿ ಭೋಜಕರಲ್ಲಿ ಸನ್ನಿಹಿತನಾಗಿರುವನು. ಶ್ರೀಹರಿಯು ಆಯಾ ವಸ್ತುಗಳಲ್ಲಿರುವ ಅವನಿಂದ ಮಾತ್ರವೇ ಸ್ವೀಕರಿಸಲು ಯೋಗ್ಯವಾದ ಸಾರಭಾಗವನ್ನು ಅವನು ಸ್ವೀಕರಿಸುವನು. ಅಚಿಂತ್ಯೈಶ್ವರ್ಯ ಸಂಪನ್ನನಾದ ಶ್ರೀಹರಿಗೆ ನಮ್ಮ ನೈವೇದ್ಯ ಸಮರ್ಪಣೆಯಿಂದ ಹೊಸ ಸುಖವು ದೊರಕಲಾರದು. ಎಲ್ಲ ಸುಖಗಳು, ಎಲ್ಲ ಕಾಲದಲ್ಲಿಯೂ ಅವನಲ್ಲಿ ಇರುತ್ತವೆ. ಹಾಗಿದ್ದರೂ ಭಕ್ತರ ನಿವೇದನೆಯು ಕೇವಲ ಅವರ ಸಂತೋಷಕ್ಕಾಗಿ. ಕಪಿಲ ರೂಪಿಯಾದ ನಿನ್ನ ಕಣ್ಣಿನಿಂದ ನಿನ್ನ ನೈವೇದ್ಯಪದಾರ್ಥಗಳನ್ನು ವೀಕ್ಷಿಸು. ನೈವೇದ್ಯಕ್ಕಿರಿಸಿದ ವಸ್ತುಗಳನ್ನು ಪವಿತ್ರ ಮತ್ತು ರಸಭರಿತವನ್ನಾಗಿಸು. ನೃಸಿಂಹರೂಪದಿಂದ ಅಲ್ಲಿರುವ ಗಂಧವನ್ನು ಸ್ವೀಕರಿಸು, ಪರಶುರಾಮ ರೂಪದಿಂದ ಅಲ್ಲಿರುವ ಮಧುರರಸವನ್ನು ಸ್ವೀಕರಿಸು ಎಂದು ಚಿಂತಿಸಬೇಕು. ಸಾಕ್ಷಾತ್ ಲಕ್ಷ್ಮೀದೇವಿಯು ಭಗವಂತನಿಗೆ ಬಡಿಸುತ್ತಿರುವಳೆಂದು ಮುಖ್ಯಪ್ರಾಣನು ಚಾಮರ ಬೀಸುತ್ತಿರುವನೆಂದು, ಭಾರತ್ಯಾದಿ ದೇವ ಸ್ತ್ರೀಯರು

ಪರಿಚಾರಕರಾಗಿ ಸೇವೆಸಲ್ಲಿಸುತ್ತಿರುವರೆಂದು ಅನುಸಂಧಾನ ಗೈಯ್ಯಬೇಕು. ಮೊದಲು ಅನ್ನವನ್ನು ಬಡಿಸಬೇಕು. ಅನಂತರ ಉಪ್ಪು, ಉಪ್ಪಿನಕಾಯಿ, ಮೊದಲಾದ ವ್ಯಂಜನ ಪದಾರ್ಥಗಳನ್ನು ಬಡಿಸಬೇಕು. ಲೇಹ್ಯ, ಪೇಯ, ಚೋಷ್ಯ, ಖಾದ್ಯ ವಸ್ತುಗಳನ್ನು ಬಡಿಸಬೇಕು. ಅನಂತರ ಪರಮಾನ್ನ, ಹರಿದ್ರಾನ್ನ, ಚಿತ್ರಾನ್ನ, ಬೆಲ್ಲದಿಂದ ಬೇಯಿಸಿದ ಗುಡಾನ್ನ, ಹುಗ್ಗಿ, ಹೀಗೆ ಷಡ್ವಿಧಾನ್ನವನ್ನು ಸಮರ್ಪಿಸಬೇಕು. ಅನಂತರದಲ್ಲಿ ನಾನಾ ಬಗೆಯ ತೈಲ ಮತ್ತು ತುಪ್ಪದಿಂದ ಸಿದ್ಧಪಡಿಸಿದ ಭಕ್ಷಗಳನ್ನು ಸಿದ್ಧಪಡಿಸಬೇಕು. ಅನಂತರ ಶೀತಲವಾದ ಕರ್ಪೂರ ಏಲಕ್ಕಿಯಿಂದ ಘಮಘಮಿಸುವ ಶುದ್ಧೋದಕವನ್ನು ಸಮರ್ಪಿಸಬೇಕು. ಮೊಸರು ಹಾಗೂ ಮಜ್ಜಿಗೆ, ಅಮೃತ ನಾನಾಬಗೆಯ ಫಲ ವಸ್ತುಗಳನ್ನು ಭಗವಂತನಿಗೆ ಸಮರ್ಪಿಸಬೇಕು. ಶ್ರೀಹರಿಯ ಭೋಜನಕಾಲದಲ್ಲಿ ವಸ್ತ್ರದಿಂದ ಆಚ್ಛಾದನೆ ಮಾಡಿಕೊಂಡು ಯಥಾಶಕ್ತಿ ನಾರಾಯಣಾಷ್ಟಾಕ್ಷರ ಮಂತ್ರವನ್ನು ಜಪಿಸಬೇಕು. ಅನಂತರ ತಾಂಬೂಲವನ್ನು ಸಮರ್ಪಿಸಬೇಕು. ಕೋಟಿಕೋಟಿ ಬ್ರಹ್ಮಹತ್ಯೆಯನ್ನು ಪರಿಹರಿಸುವ ಮಂಗಳ ನೀರಾಜನವನ್ನು ಮಾಡಿ ಆಪಾದ ಮಸ್ತಕ ಭಗವಂತನ ವಿಗ್ರಹವನ್ನು ಪರಮಾದರದಿಂದ ವೀಕ್ಷಿಸಬೇಕು. ಅನಂತರ ಭಗವಂತನಿಗೆ ಕರ್ಮ ಸಮರ್ಪಣೆಯನ್ನು ನಡೆಸಬೇಕು.

**ಅನ್ಯದೇವತೆಗಳಾರು ?**

ಶ್ರೀಹರಿಗೆ ಸಮರ್ಪಿಸಿದ ನೈವೇದ್ಯವನ್ನು ವಿನಾಯಕ, ತ್ರಿಲೋಚನ ಮೊದಲಾದ ಇತರ ದೇವತೆಗಳಿಗೆ ಪ್ರಸಾದ ರೂಪವಾಗಿ ಸಮರ್ಪಿಸಬಹುದಾದರೂ, ಆಯಾದೇವತೆಗಳಿಗೆ ಸಮರ್ಪಿಸಿದ ಅನ್ನ ಭಕ್ಷ್ಯಗಳನ್ನು ನಾವು ಸ್ವೀಕರಿಸುವಂತಿಲ್ಲ. ಶ್ರೀಹರಿ, ಲಕ್ಷ್ಮೀ, ಮುಖ್ಯಪ್ರಾಣದೇವರು ಈ ಮೂವರನ್ನು ಹೊರತು ಪಡಿಸಿ ಕೆಳಗಿನ ಕಕ್ಷೆಯ ಎಲ್ಲ ದೇವತೆಗಳೂ 'ಅನ್ಯ ದೇವತೆ' ಗಳೆನಿಸುವರು.

'ಅನ್ಯ ದೇವತೆಗಳ ಪ್ರಸಾದವನ್ನು ಸ್ವೀಕರಿಸಬಾರದು' ಎಂಬ ವಾಕ್ಯಕ್ಕೆ ಹೀಗೆ ಅಭಿಪ್ರಾಯವನ್ನು ಕೆಲವರು ವರ್ಣಿಸುವುದಿದೆ -''ಎಲ್ಲಿ ಶೇಷ , ಶಿವ, ವಿನಾಯಕ ಮೊದಲಾದ ದೇವತೆಗಳ ಪೂಜೆಯನ್ನು ಮಾಡುವಾಗ ಅಂತರ್ಯಾಮಿಯಾದ ಪರಮಾತ್ಮನತನಕ ದೃಷ್ಟಿಯು ಜಾಗ್ರತಗೊಳ್ಳುವುದಿಲ್ಲವೋ, ಪೂಜೆ ನೈವೇದ್ಯಗಳು ಆಯಾದೇವತೆಗಳಿಗೆ ಮಾತ್ರ ಸೀಮಿತವೆಂಬ ಭಾವನೆ ಇರುವುದೋ ಅಂತಹ ಸ್ಥಳ

ದಲ್ಲಿ ನೈವೇದ್ಯವು ಸ್ವೀಕಾರಾರ್ಹವಲ್ಲ. ಆದರೆ ಆಯಾದೇವತೆಗಳ ಒಳಗಿರುವ ಭಗವಂತನಿಗೆ ನೈವೇದ್ಯವನ್ನು ಅರ್ಪಿಸಿ ನಿರ್ದಿಷ್ಟ ದೇವತೆಗಳಿಗೆ ಸಮರ್ಪಿಸಿದ ಪ್ರಸಾದವನ್ನು ನಾವು ಸ್ವೀಕರಿಸಬಹುದು''.

ಈ ವಾದವು ಸಮಂಜಸವಲ್ಲ. ಶಾಸ್ತ್ರದೃಷ್ಟಿಯಂತೆ ಇತರ ದೇವತೆಗಳ ಪೂಜೆಯೆಂದರೆ ಆಯಾದೇವತೆಗಳ ಒಳಗಿರುವ ಭಗವಂತನ ಪೂಜೆಯೇ ಆಗಿರುತ್ತದೆ. ವಿಷ್ಣುಸ್ಮೃತಿಯಿಲ್ಲದ ಕೇವಲ ಆಯಾದೇವತೆಗಳ ಪೂಜೆಯು 'ಆಸುರೀ ಪೂಜೆ' ಎನಿಸಿದ್ದು ಆದರಿಂದ ದೇವತೆಗಳು ಸಂತುಷ್ಟರಾಗಲಾರರು. ಧನ ಕನಕ ಮೊದಲಾದ ಲೌಕಿಕಫಲಗಳನ್ನು ಕರುಣಿಸಿದರೂ ಜ್ಞಾನ ಭಕ್ತಿ ಮೊದಲಾದ ಸಾತ್ವಿಕ ಫಲವನ್ನು ನೀಡಲಾರರು.

**ವಿಷ್ಣುಸ್ಮೃತಿವಿಹೀನಾ ತು ಪೂಜಾ ಸ್ಯಾದ್ ಆಸುರೀ ಮತಾ ।**
**ಗೃಹ್ಣಂತಿ ದೇವತಾ ನೈತಾಂ ತತಃ ಸ್ಯಾದ್‌ದೇಶವಿಪ್ಲವಃ ।**
**ವ್ಯಾಧಿ ಚೋರಾದಿಭಿಸ್ತಸ್ಮಾತ್ ಅಂತರ್ಧ್ಯೇಯೋ ಹರಿಃ ಸದಾ ॥**

ಆದ್ದರಿಂದ ಶಾಸ್ತ್ರವು, ಇತರ ದೇವತೆಗಳನ್ನು ಪೂಜಿಸುವುದೆಂದರೆ ಅಂತರ್ಯಾಮಿ ದೃಷ್ಟಿಯಿಂದ ಪೂಜಿಸುವುದೆಂದೇ ವಿಧಿಸುತ್ತದೆ. ವಾಯು ದೇವರಿಗಿಂತ ಕೆಳಗಿನ ಕಕ್ಷೆಯ ದೇವತೆಗಳು ಕಲಿಯ ವಿಕಾರಕ್ಕೆ ಒಳಪಟ್ಟಿದ್ದು ಅವರ ನೈವೇದ್ಯವು ಸ್ವೀಕಾರಾರ್ಹವಾಗಿರುವುದಿಲ್ಲ. ವಾಯುದೇವರ ನೈವೇದ್ಯವು ಭಕ್ತಿ ಜ್ಞಾನಗಳ ಅಭಿವೃದ್ಧಿಗೆ ಕಾರಣವಾಗಿದ್ದು ಅವಶ್ಯ ಸ್ವೀಕಾರಾರ್ಹವಾಗಿದೆ. ವಾಯುದೇವರ ಪ್ರಸಾದವನ್ನು ಸ್ವೀಕರಿಸಬಾರದೆಂಬ ವ್ಯಕ್ತಿಯು ಅನೇಕ ನರಕಗಳನ್ನು ಹೊಂದುವನು.

**ಶ್ರೀಹರಿಯ ಮುಂದೆ ಇತರ ಪ್ರತಿಮೆಗಳ ಪೂಜೆ ಸಲ್ಲದು.**

ಶ್ರೀಹರಿಯ ಪೂಜೆಯನ್ನು ನಡೆಸುವಾಗ ಆವರಣ ಪೂಜಾವಿಧಿಯಂತೆ ಅನೇಕ ದೇವತೆಗಳ ಸ್ಮರಣೆಯೊಂದಿಗೆ ಇತರ ದೇವತೆಗಳ ಪೂಜೆಯು ಅಂಗೀಕರಿಸಲ್ಪಟ್ಟಿದೆ. ಆದರೆ ಶ್ರೀಹರಿಯ ಮುಂದೆ, ಹನುಮಂತ, ಶೇಷ, ಗರುಡ, ಪ್ರತಿಮೆಗಳನ್ನು ಬಿಟ್ಟು ಬೇರೆ ಪ್ರತಿಮೆಗಳನ್ನು ಅಥವಾ ಬೃಂದಾವನಗಳನ್ನು ಪೂಜಿಸುವಂತಿಲ್ಲ. ಇಂದಿಗೂ ಎಲ್ಲ ಶ್ರೀಮಠಗಳಲ್ಲಿಯೂ ಪೀಠಾಧೀಶರು

ಶ್ರೀಹರಿಯ ಪೂಜೆಯನ್ನು ಮುಗಿಸಿ, ದೇವರ ಪೆಟ್ಟಿಗೆಯನ್ನು ಕಟ್ಟಿ ಅನಂತರ ತಮ್ಮ ತಮ್ಮ ಪರಂಪರೆಯ ಗುರುಗಳ ಬೃಂದಾವನಗಳಿಗೆ, ಪೂಜೆ ಹಾಗು ಹಸ್ತೋದಕ ಸಲ್ಲಿಸುವುದನ್ನು ಕಾಣಬಹುದಾಗಿದೆ. ಈ ಹಿನ್ನೆಲೆಯಲ್ಲಿ ಶ್ರೀಹರಿಯ ಪ್ರತಿಮೆ ಅಥವಾ ಶಾಲಗ್ರಾಮಗಳ ಮುಂದೆ ಇತರ ದೇವತೆಗಳ ಪೂಜೆ ಸಲ್ಲದು.

**ಕುದಿಯುವ ನೀರಿನಲ್ಲಿ ಅನ್ನ ಮಾಡಬಾರದು**

ಕುದಿಯುವ ನೀರಿನಲ್ಲಿ ಅಕ್ಕಿಯನ್ನು ಸುರಿದು ಅನ್ನವನ್ನು ಸಿದ್ಧಪಡಿಸುವುದು ಗೋಮಾಂಸ ತುಲ್ಯವೆನಿಸಿದೆ. ಆದ್ದರಿಂದ ತೊಳೆದ ಅಕ್ಕಿಯೊಡನೆ ತಣ್ಣೀರನ್ನು ಬೆರಸಿಯೇ ಪಾಕವನ್ನು ಸಿದ್ಧಪಡಿಸಬೇಕು. ಅನ್ನದ ಸಾರವನ್ನು (ಗಂಜಿ) ಬಸಿದು ಉಳಿದ ಅನ್ನದಿಂದ ವೈಶ್ವದೇವ ನಡೆಸುವುದು ದೇವತೆಗಳ ಶಾಪಕ್ಕೆ ಕಾರಣವಾಗಿದೆ. ಸಾರಯುತವಾದ ಅನ್ನವನ್ನು ತೀರ್ಥೋದಕದಿಂದ ಪವಿತ್ರಗೊಳಿಸಿ ವೈಶ್ವದೇವವನ್ನು ನಡೆಸಬೇಕು ನಾರಾಯಣಾಷ್ಟಾಕ್ಷರದಿಂದ ಎಂಟು ಆಹುತಿಗಳು, ಪುರುಷ ಸೂಕ್ತದಿಂದ ಹದಿನಾರು ಆಹುತಿಗಳು, ವ್ಯಾಹೃತಿಯಿಂದ ನಾಲ್ಕು ಆಹುತಿಗಳು ಅಗ್ನಿಯಲ್ಲಿ ಪ್ರದೇಯವಾಗಿವೆ. ಅನ್ನವನ್ನು ಮಾಡದಿರುವಾಗ ಅಕ್ಕಿಯಿಂದಲಾಗಲೀ ಅಥವಾ ನೀರಿನಿಂದಲಾಗಲೀ ವೈಶ್ವದೇವವನ್ನು ಮಾಡಬಹುದಾಗಿದೆ.

**ಹದಿನೆಂಟುದಳ ತುಳಸಿ ಸ್ವೀಕಾರಾರ್ಹವಾಗಿದೆ.**

ಶ್ರೀಹರಿಗೆ ಅರ್ಪಿತವಾದ ನಿರ್ಮಾಲ್ಯ ತುಳಸಿಯನ್ನು ಎರಡು ದಳ ಪ್ರತ್ಯೇಕವಾಗಿ ಎರಡು ಕಿವಿಗಳಲ್ಲಿ ಧರಿಸಬೇಕು. ಮುಖ, ಹೊಕ್ಕಳು ಹೊಟ್ಟೆ ತಲೆ ಇವುಗಳಲ್ಲಿ ಒಂದೊಂದು ದಳವನ್ನು ಧರಿಸಬೇಕು. ತೀರ್ಥದಲ್ಲಿ ಮೂರು ದಳಗಳನ್ನು ಕ್ರಮವಾಗಿ ಸ್ವೀಕರಿಸಬೇಕು. ಪಂಚಪ್ರಾಣಾಹುತಿಗಳನ್ನು ಸ್ವೀಕರಿಸುವಾಗ ಐದು ದಳಗಳನ್ನು ಬಳಸಬೇಕು. ಭೋಜನಾನಂತರ ಮೂರು ದಳ ತುಳಸಿಯನ್ನು ಸ್ವೀಕರಿಸಬೇಕು. ವಿಷ್ಣುವಿಗೆ ಅರ್ಪಿಸಿದ ಅಂಗಾರ ಪ್ರಸಾದವನ್ನು ದ್ವಾದಶ ನಾಮ ಸ್ಥಳಗಳಲ್ಲಿ ಧರಿಸಿಕೊಳ್ಳಬೇಕು. ಹಣೆಯಲ್ಲಿ ವಿಶೇಷವಾಗಿ ಧರಿಸುವ ಈ ಅಂಗಾರದಿಂದ ಬ್ರಹ್ಮಹತ್ಯಾದಿ ಪಾತಕಗಳು ನಾಶಹೊಂದುತ್ತವೆ.

**ಗೋಗ್ರಾಸದ ಮಹತ್ವ**

ಬ್ರಾಹ್ಮಣರಿಗೆ ಅನ್ನದಾನ ಮಾಡಿ ಗೋಗ್ರಾಸವನ್ನು ನೀಡಬೇಕು. ಆಗ ಪರಿ

ಸಬೇಕಾದ ಮಂತ್ರದ ಭಾವಹೀಗಿದೆ - ವಿಷ್ಣುವಿಗೆ ಪ್ರೀತಿಪಾತ್ರವಾದ ಓ ಕಾಮಧೇನುವೇ, ನಿತ್ಯವೂ ನೀನು ವಿಷ್ಣುವಿನ ಸನ್ನಿಧಾನ ಪಾತ್ರಳಾಗಿದ್ದಿ. ದೇವಲೋಕದಲ್ಲಿ ನೆಲೆಸಿರುವವಳೇ ! ನಾನು ಸಮರ್ಪಿಸಿದ ಆಹಾರವನ್ನು ಸ್ವೀಕರಿಸು - ಎಂದು ಪ್ರಾರ್ಥಿಸಬೇಕು. ಈ ಸಂದರ್ಭದಲ್ಲಿ ವ್ಯಾಸರು ಉಪದೇಶಿಸಿದ ಗೋ ಸಾವಿತ್ರಿ ಸ್ತೋತ್ರವನ್ನು ಪಠಿಸುವುದು ಅತ್ಯಂತ ಯೋಗ್ಯವಾಗಿದೆ. ಇದರ ಪಠನವು ಎಲ್ಲ ಪಾಪಗಳ ಬಿಡುಗಡೆಗೆ ಕಾರಣವಾಗಿದೆ. ಆದರ ಸಾರ ಹೀಗಿದೆ - ಗೋಮಾತೆಯ ಉಸಿರಿನಲ್ಲಿ ಷಡಂಗಗಳಿಂದ ಕೂಡಿದ ವೇದಗಳು ಹೊರಹೊಮ್ಮುತ್ತಿವೆ. ಇವುಗಳ ಕೊಂಬಿನಲ್ಲಿ ಮಹಾವಿಷ್ಣುವು ಸನ್ನಿಹಿತನಾಗಿದ್ದಾನೆ. ತಲೆಯಲ್ಲಿ ಚತುರ್ಮುಖನು, ಹಣೆಯಲ್ಲಿ ಶಂಕರನು, ಕಿವಿಗಳಲ್ಲಿ ಅಶ್ವಿನಿದೇವತೆಗಳು, ಕಣ್ಣುಗಳಲ್ಲಿ ಸೂರ್ಯ, ಚಂದ್ರರು, ಕುತ್ತಿಗೆಯಲ್ಲಿ ವರುಣದೇವನು, ಹೃದಯದಲ್ಲಿ ಅಗ್ನಿಯು, ಹೊಟ್ಟೆಯಲ್ಲಿ ಧರಾದೇವಿಯು, ಹೊಕ್ಕಳಿನಲ್ಲಿ ಅಂತರಿಕ್ಷಾಭಿಮಾನಿದೇವತೆಯು, ಅಂಗ ಸಂಧಿಗಳಲ್ಲಿ ನದ್ಯಭಿಮಾನಿ ದೇವತೆಗಳು, ಅಪಾನದಲ್ಲಿ ಸಕಲ ತೀರ್ಥಾಭಿಮಾನಿ ದೇವತೆಗಳು ಮತ್ತು ಗಂಗೆಯು ಸನ್ನಿಹಿತರಾಗಿರುವರು. ಗೋಮಯದಲ್ಲಿ ಮಹಾಲಕ್ಷ್ಮಿಯು ಸನ್ನಿಹಿತಳಾಗಿರುವಳು, ಗೋಮಾತೆಯ ಕೆಚ್ಚಲಲ್ಲಿ ಸಾಗರದ ಅಭಿಮಾನಿ ದೇವತೆಗಳು, ಕಾಲಿನ ಮಧ್ಯಭಾಗದಲ್ಲಿ ಗಂಧರ್ವರು, ತುದಿಯಲ್ಲಿ ನಾಗದೇವತೆಗಳು ಸನ್ನಿಹಿತರಾಗಿರುವರು. ಗೊರಸಿನಲ್ಲಿ ಅಪ್ಸರೆಯರು, ಬೆನ್ನಿನ ಹಿಂಭಾಗಲ್ಲಿ ಮೋಡದ ಅಭಿಮಾನಿದೇವತೆಗಳು ಸನ್ನಿಹಿತರಾಗಿರುವರು. ಗೋಮಾತೆಯ ರೋಮಗಳಲ್ಲಿ ಎಲ್ಲ ಋಷಿಗಳು, ಚರ್ಮದಲ್ಲಿ ಪ್ರಜಾಪತಿ ಇರುವನು. ಹಸುಗಳಲ್ಲಿ ಎಲ್ಲ ದೇವತೆಗಳಿದ್ದು ಪ್ರಧಾನವಾಗಿ ಕೇಶವನಿರುವನು. ಈ ಪವಿತ್ರ ಸ್ತೋತ್ರವನ್ನು ಪಠಿಸುವವರು, ಎಲ್ಲ ಪಾಪಗಳಿಂದ ಮುಕ್ತಿಯನ್ನು ಪಡೆದು ಶ್ರೀಕೃಷ್ಣನ ಕೃಪೆಗೆ ಪಾತ್ರರಾಗುವರು.

### ಭೋಜನ ಯಜ್ಞ

ಭೋಜನವು ಪ್ರಾಣಾಗ್ನಿಹೋತ್ರಯಜ್ಞವೆನಿಸಿದ್ದು ವಿಷ್ಣು ಸ್ಮೃತಿ ಪೂರ್ವಕವಾಗಿ ನಡೆಸಿದಾಗ ಮಹಾಫಲವನ್ನು ದೊರಕಿಸಿಕೊಡುತ್ತದೆ. ಭೋಜನಾರಂಭದಲ್ಲಿ ತೀರ್ಥೋದಕವನ್ನು ಹಾಗೂ ತುಳಸಿಯನ್ನು ಅನ್ನದ ಮೇಲೆ

ಹಾಕಿ ಪರಿಶೇಚನ ಮಾಡಿ ಚಿತ್ರ, ಚಿತ್ರಗುಪ್ತ, ಧರ್ಮರಾಜ ಮತ್ತು ಎಲ್ಲ ಭೂತಾಭಿಮಾನಿದೇವತೆಗಳಿಗೆ ಆಹುತಿಯನ್ನು ನೀಡಿ (ಸ್ವಲ್ಪ ಅನ್ನವನ್ನು ತೆಗೆದಿಟ್ಟು) ಕೈತೊಳೆಯಬೇಕು. ಈ ನಾಲ್ಕು ಆಹುತಿಗಳನ್ನು ನೆಲದಮೇಲೆ ಇಡದೆಯೇ ಎಲೆ ಯಲ್ಲಿ ಅಥವಾ ಪಾತ್ರೆಯಲ್ಲಿ ಇಡಬೇಕು. ಚಿತ್ರಾಹುತಿಯನ್ನು ಇರಿಸಿ ಅನಂತರ ಅದನ್ನು ವಿಸರ್ಜಿಸಬೇಕು. ಅನಂತರ ಯಮಸೂಕ್ತವನ್ನು ಪಠಿಸಿ ಇನ್ನೊಬ್ಬರಿಂದ ತೀರ್ಥವನ್ನು ಕೈಯಲ್ಲಿ ಹಾಕಿಸಿಕೊಂಡು ಆಪೋಶನವನ್ನು ತೆಗೆದುಕೊಳ್ಳಬೇಕು. ತುಪ್ಪದಿಂದ ತುಳಸೀದಳದೊಂದಿಗೆ ಪಂಚ ಪ್ರಾಣಾಹುತಿಯನ್ನು ಸ್ವೀಕರಿಸಬೇಕು. ಅನಂತರದಲ್ಲಿ ಸ್ವಲ್ಪ ಜಲಪಾನವನ್ನು ನಡೆಸಿ ಇತರ ಭೋಜ್ಯ ಪದಾರ್ಥಗಳನ್ನು ಸ್ವೀಕರಿಸಬೇಕು. **ಶ್ರೀಹರಿಗೆ ಅರ್ಪಿತವಾದ ಸಾತ್ವಿಕಾಹಾರವನ್ನು ಆಲಸ್ಯಕಾರಣ ವಾಗುವಂತೆ ಹೆಚ್ಚು ಸ್ವೀಕರಿಸಿದಲ್ಲಿ ಅದು ತಾಮಸಾಹಾರವಾಗುವುದು. ಆದ್ದರಿಂದ ಮಿತ ಭೋಜನವನ್ನು ಅಳವಡಿಸಿಕೊಳ್ಳಬೇಕು.** ಮಿತಭೋಜನ ಮಾಡುವ ವ್ಯಕ್ತಿಗೆ ಆರೋಗ್ಯ ಆಯುಷ್ಯ, ಬಲ, ಸುಖ ಆರೋಗ್ಯವುಳ್ಳ ಸಂತತಿ ಉಂಟಾಗುತ್ತವೆ. ಕಡಿಮೆ ಊಟಮಾಡುವವನು 'ಹೊಟ್ಟೆಬಾಕ' ಎಂಬ ಅಪಖ್ಯಾತಿಗೆ ಎಂದೂ ಗುರಿಯಾಗಲಾರನು. 'ಕಡಿಮೆ ಊಟಮಾಡುವವನು' ಎಂಬ ಕೀರ್ತಿಯು ಅರ ಸಿಬರುವುದು-

**ಗುಣಾಶ್ಚ ಷಣ್ಮಿತಭುಕ್ತಂ ಭಜಂತೇ ಆರೋಗ್ಯಮಾಯುಶ್ಚ ಬಲಂ ಸುಖಂ ಚ।**
**ಅನಾವಿಲಂಚಾಸ್ಯ ಭವತ್ಯಪತ್ಯಂ ನ ಚೈನಮಾದ್ಯೂನ ಇತಿ ಕ್ಷಿಪಂತಿ**

*(ಉ. 37. 37)*

**ಪರಾನ್ನ ಸಲ್ಲದು**

**'ಪರಪಾಕೋ ಗೃಹಸ್ಥಸ್ಯ ಕ್ಷತ್ರಿಯಸ್ಯ ವಿಶೇಷತಃ'** ಎಂಬ ಮಹಾಭಾರತ ತಾತ್ಪರ್ಯದಲ್ಲಿನ ಭಗವತ್ಪಾದರ ಆದೇಶದಂತೆ ಗೃಹಸ್ಥನಿಗೆ ಪರಾನ್ನ ಭೋಜನ ಸಲ್ಲದು. ಆದರೆ ವಿಷ್ಣು ಭಕ್ತರ ಮನೆಯಲ್ಲಿ ನೀಡುವ ಹರಿಪ್ರಸಾದ ಅವಶ್ಯ ಸ್ವೀಕಾರಾರ್ಹವಾಗಿದೆ.

**'ಯಾಚೇತ ಶ್ರೋತ್ರಿಯಸ್ಯಾನ್ನಂ ತದಭಾವೇ ಜಲಂ ಪಿಬೇತ್'** ಎಂಬ ವಚನವು ಶುದ್ಧರಾದ ವಿಷ್ಣುಭಕ್ತರ ಅನ್ನಸ್ವೀಕಾರವನ್ನು ವಿಧಿಸುತ್ತಿದೆ. ಪ್ರಕೃತ ಪರಾನ್ನ ವೆಂದರೆ, ವಿಷ್ಣು ಭಕ್ತಿ ಇಲ್ಲದ ಅಸಂಸ್ಕೃತರ ಅನ್ನವೆಂದೇ ಅರ್ಥವಾಗಿದೆ.

ವೈಷ್ಣವರ ಮನೆಯಲ್ಲಿ ಊಟ ಮಾಡುವವನು, ಅಪಾರ ಪುಣ್ಯರಾಶಿಯನ್ನು ಪಡೆಯುವನು. ವೈಷ್ಣವಾನ್ನವನ್ನು ಪರಾನ್ನವೆನ್ನುವವರು ಅನೇಕ ಜನ್ಮಗಳಲ್ಲಿ ಸಂಪಾದಿಸಿದ ಪುಣ್ಯವನ್ನು ಕಳೆದುಕೊಳ್ಳುವವರು. ಈ ಹಿನ್ನೆಲೆಯಲ್ಲಿ ವೇದೋಕ್ತ ಕರ್ಮಾನುಷ್ಠಾನ ಸಂಪನ್ನರಾದ ವೈಷ್ಣವರ ಮನೆಯಲ್ಲಿ ಹರಿನಿವೇದಿತಾನ್ನ ಸ್ವೀಕಾರವು ಅತ್ಯಂತ ಶ್ರೇಯಸ್ಕರವಾಗಿದೆ.

**ಸ್ವಯಂ ವ್ಯಕ್ತ ಸ್ಥಳಗಳ ಮಹತ್ವ-**

ಸ್ವಯಂವ್ಯಕ್ತ ಕ್ಷೇತ್ರದಂತೆ, ಸ್ವಯಂ ವ್ಯಕ್ತವಲ್ಲದಿದ್ದರೂ ಅತ್ಯಂತ ಶ್ರೇಷ್ಠವೆನಿಸಿದ ದೇಗುಲಗಳಲ್ಲಿ ಸ್ಪೃಷ್ಟಾಸ್ಪೃಷ್ಟದೋಷವಿರುವುದಿಲ್ಲ. ಶ್ರೀರಂಗ, ವೇಂಕಟಾಚಲ, ಅನಂತಶಯನ, ಕಾಂಚಿ,ಪಂಢರಪುರ, ಪುರಿ, ದ್ವಾರಾವತಿ, ಬದರಿ, ಮೊದಲಾದ ಸ್ಥಳಗಳಲ್ಲಿ ಭಗವಂತನ ವಿಶೇಷ ಸನ್ನಿಧಾನವಿದೆ. ಇಂತಹ ದೇಗುಲಗಳಲ್ಲಿ ಹರಿಗೆ ಸಮರ್ಪಿಸಿದ ಫಲಪುಷ್ಪಗಳು ಯೋಗ್ಯ ಆಹಾರ ವಸ್ತುಗಳು ಸ್ವೀಕಾರ್ಯವಾಗಿವೆ.

**ಭೋಜನ ಸಲ್ಲದು-**

ಏಕಾದಶಿಯಂದು, ಗ್ರಹಣದಿನದಂದು ಮತ್ತು ಜಾತಾಶೌಚ, ಮೃತಾಶೌಚವಿರುವವರ ಮನೆಗಳಲ್ಲಿ ಭೋಜನಮಾಡಬಾರದು. ಸ್ತ್ರೀಯರು, ಅಸಂಸ್ಕೃತರು ತಿಂದು ಉಳಿದ ಆಹಾರವನ್ನು ಭುಂಜಿಸಬಾರದು. ತಲೆ ಕೂದಲಿನಿಂದ ಕಲುಷಿತವಾದ ಅನ್ನವನ್ನು ಪಿತೃಶೇಷವನ್ನು ಭುಂಜಿಸಬಾರದು. ವಿಶೇಷವಾದ ಅನುಷ್ಠಾನ ವಿಲ್ಲದವರು, ಮಾಸಿಕ ಶ್ರಾದ್ಧ, ಸಾಂವತ್ಸರಿಕಶ್ರಾದ್ಧ, ಸಪಿಂಡೀಕರಣದಿನಗಳಲ್ಲಿ ಭುಂಜಿಸಬಾರದು. ಬೆಕ್ಕುಕೋತಿ, ಮೊದಲಾದ ಪ್ರಾಣಿಗಳಿಂದ ಸ್ಪೃಷ್ಟಾನ್ನವನ್ನು ಭುಂಜಿಸಬಾರದು, ಅಸಂಸ್ಕೃತರು, ಪತಿತರು, ಧರ್ಮದೂಷಕರು ನೋಡಿದ ಅನ್ನವನ್ನು ಸ್ವೀಕರಿಸಬಾರದು.

**ಭೋಜನಾನಂತರ ಕರ್ತವ್ಯ-**

ಭೋಜನಾನಂತರದಲ್ಲಿ ಕಣ್ಣುಗಳನ್ನು ತೊಳೆದುಕೊಂಡು ಅಂಗುಷ್ಠದ ತುದಿಯಿಂದ ಜಲಸೇಚನವನ್ನು ಮಾಡಿಕೊಳ್ಳಬೇಕು. ಇದರಿಂದ (ಅಜ್ಞಾನ ಮೂಲಕವಾಗಿ ಸಂಭವಿಸುವ ಅನ್ನದೋಷವನ್ನು ಪರಿಹರಿಸಿ ಕೊಳ್ಳಬಹುದಾಗಿದೆ.)

ಕಂಗಳಲ್ಲಿ ಅಂಗುಷ್ಠದ ಕೊನೆಯಿಂದ ನೀರನ್ನು ಹಾಕಿಕೊಳ್ಳುವಾಗ, ಶರ್ಯಾತಿ, ಸುಕನ್ಯಾ, ಚ್ಯವನ, ಇಂದ್ರ, ಅಶ್ವಿನಿದೇವತೆಗಳನ್ನು ಸ್ಮರಿಸಿಕೊಳ್ಳಬೇಕು. ಆನಂತರ ಆಚಮನ ಮಾಡಿ ತೀರ್ಥವನ್ನು ಸ್ವೀಕರಿಸಿ ನಾರಾಯಣಾಷ್ಟಾಕ್ಷರ ಮಂತ್ರವನ್ನು ಜಪಿಸುತ್ತಾ ಹೊಟ್ಟೆಯನ್ನು ಸ್ಪರ್ಶಿಸಬೇಕು. ಅಭೀಷ್ಟದೇವತೆಯನ್ನು ಸ್ಮರಿಸುತ್ತಾ, ಸಾಯಂಕಾಲದವರೆಗೆ ಪಾಠ ಪ್ರವಚನಾದಿ ಕಾರ್ಯಗಳಲ್ಲಿ ತೊಡಗಬೇಕು.

**ಸದಾ ಹರಿ ಸ್ಮೃತಿ ಸಂಪಾದ್ಯವಾಗಿದೆ.**

ಬೆಳಗುಜಾವದಲ್ಲಿ ಎದ್ದಕೂಡಲೆ ನಾರಾಯಣನನ್ನು ಸ್ಮರಿಸಬೇಕು. ತುಳಸಿಯಲ್ಲಿರುವ ಶ್ರೀಕೃಷ್ಣನನ್ನು ವಂದಿಸಬೇಕು. ನಡೆಸುವ ಕಾರ್ಯಗಳಲ್ಲಿ ನಿರ್ದಿಷ್ಟ ಭಗವದ್ರೂಪಗಳನ್ನು ಸ್ಮರಿಸಬೇಕು. ಕೊಳೆಯನ್ನು ವಿಸರ್ಜಿಸುವಾಗ ಕೇಶವನನ್ನು, ಮೃತ್ತಿಕಾಶೌಚದಲ್ಲಿ ತ್ರಿವಿಕ್ರಮನನ್ನು , ದಂತಧಾವನ ಕಾಲದಲ್ಲಿ ಅಷ್ಟಭುಜನಾದ ಶ್ರೀಹರಿಯನ್ನು ಸ್ಮರಿಸಬೇಕು. ಮುಖತೊಳೆಯುವಾಗ ಮಾಧವನನ್ನು, ಹಸುಗಳ ಮೈ ತೊಳಿಸುವಾಗ, ಹಸುಗಳನ್ನು ಕರೆಯುವಾಗ ಗೋಪಾಲಕೃಷ್ಣನನ್ನು ಸ್ಮರಿಸಬೇಕು. ಮಕ್ಕಳಿಗೆ ಸ್ತನ್ಯಪಾನ ಮಾಡಿಸುವಾಗ ಬಾಲಕೃಷ್ಣನನ್ನು , ಮೊಸರು ಕಡೆಯುವಾಗ ಕಡಗೋಲು ಕೃಷ್ಣನನ್ನು ಸ್ಮರಿಸಬೇಕು. ತುಳಸಿ ಮೃತ್ತಿಕೆಯನ್ನು ಹಚ್ಚಿಕೊಂಡು ಸ್ನಾನಮಾಡುವಾಗ ವರಾಹನನ್ನು , ವಸ್ತ್ರಧರಿಸುವಾಗ ಉಪೇಂದ್ರನನ್ನು, ಬಟ್ಟೆ ಒಣಗಿಸುವಾಗ ವಾಸುದೇವನನ್ನು ಸ್ಮರಿಸಬೇಕು. ಊರ್ಧ್ವಪುಂಡ್ರಗಳನ್ನು ಧರಿಸುವಾಗ ಕೇಶವಾದಿ ದ್ವಾದಶ ಮೂರ್ತಿಗಳನ್ನು, ಮುದ್ರೆಗಳನ್ನು ಧರಿಸುವಾಗ ಕೃದ್ಧೋಲ್ಕಾದಿ ರೂಪಗಳನ್ನು ಸ್ಮರಿಸಬೇಕು. ಭೋಜನಕಾಲದಲ್ಲಿ ಆಪೋಶನ ತೆಗೆದುಕೊಳ್ಳುವಾಗ ವಾಯುದೇವನಲ್ಲಿರುವ ಶ್ರೀಹರಿಯನ್ನು ಸ್ಮರಿಸಬೇಕು. ಯಜ್ಞೋಪವೀತವನ್ನು ಧಾರಣೆಮಾಡುವಾಗ, ಹೋಮಕಾಲದಲ್ಲಿ ಮತ್ತು ಆರತಿಯನ್ನು ತೆಗೆದುಕೊಳ್ಳುವಾಗ ಪರಶುರಾಮದೇವರನ್ನು ಸ್ಮರಿಸಬೇಕು. ತೀರ್ಥವನ್ನಿಡುವ ಪಾತ್ರೆಯಲ್ಲಿ ಕೃಷ್ಣ,ರಾಮ, ವಾಸುದೇವರನ್ನು ಸ್ಮರಿಸಬೇಕು. ಶಂಖೋದಕ ಪ್ರೋಕ್ಷಣಕಾಲದಲ್ಲಿ ಮುಕುಂದನನ್ನು ಸ್ಮರಿಸಬೇಕು. ಭೋಜನಕಾಲದಲ್ಲಿ ಗೋವಿಂದನನ್ನು ನಾನಾವಿಧ ಭಕ್ಷ್ಯಗಳನ್ನು ತಿನ್ನುವಾಗ, ಅಚ್ಯುತನನ್ನು ಪಲ್ಯ ಮೊದಲಾದ ವಸ್ತುಗಳನ್ನು ತಿನ್ನುವಾಗ, ಧನ್ವಂತ್ರಿಯನ್ನು ಪರಮಾನ್ನ ಭಕ್ಷಣಕಾಲದಲ್ಲಿ ಸ್ಮರಿಸಬೇಕು. ಜಲ ಪಾತ್ರೆಯಲ್ಲಿ ಬಾಲಕೃಷ್ಣನನ್ನು

ಗಂಗೋದಕ ಪಾನಕಾಲದಲ್ಲಿ ತ್ರಿವಿಕ್ರಮನನ್ನು ಸ್ಮರಿಸಬೇಕು, ಕ್ಷೀರಪಾನಮಾಡುವಾಗ ಮತ್ತು ಹಣ್ಣುಗಳನ್ನು ತಿನ್ನುವಾಗ ಶ್ರೀನಿವಾಸನನ್ನು ಸ್ಮರಿಸಬೇಕು. ಪಾನಕವನ್ನು ಕುಡಿಯುವಾಗ ನರಸಿಂಹನನ್ನು, ಪ್ರಯಾಣಿಸುವಾಗ ಗರುಡವಾಹನ ಶ್ರೀಹರಿಯನ್ನು , ಮಕ್ಕಳನ್ನು ಮುದ್ದಿಸುವಾಗ ವೇಣುಗೋಪಾಲಕೃಷ್ಣನನ್ನು ಸ್ಮರಿಸಬೇಕು. ಮಡದಿಯೊಡನೆ ಬೆರೆಯುವಾಗ ಗೋಪೀವಲ್ಲಭನೂ ಲಕ್ಷ್ಮೀಶನೂ ಆದ ಶ್ರೀಹರಿಯನ್ನು ಸ್ಮರಿಸಬೇಕು. ಹಾಸಿಗೆಯಲ್ಲಿ ಸಂಕರ್ಷಣನನ್ನು ತಾಂಬೂಲದಲ್ಲಿ ಅನಿರುದ್ಧನನ್ನು , ಮಲಗುವಾಗ ಪದ್ಮನಾಭನನ್ನು ಸ್ಮರಿಸಬೇಕು. ಭಾಗವತಾದಿ ಕಥೆಗಳನ್ನು ಕೇಳುವಾಗ ವ್ಯಾಸ ಹಯಗ್ರೀವ ರೂಪಗಳನ್ನು ಸ್ಮರಿಸಬೇಕು. ವಿಷ್ಣುಸ್ಮೃತಿ ನಮ್ಮ ಬದುಕಿನುದ್ದಕ್ಕೂ ಆವಶ್ಯಕವೆಂದು ಈ ಪವಿತ್ರ ಗ್ರಂಥವು ನಮಗೆ ಬೋಧನೆಯನ್ನು ನೀಡುತ್ತದೆ.

**ಕೃತಜ್ಞತಾ ಸಮರ್ಪಣೆ**

ಈ ಕೃತಿಯನ್ನು ಹೊರತರುವಲ್ಲಿ ಪರಮಪೂಜ್ಯ ಗುರುಗಳಾದ ಶ್ರೀಶ್ರೀವಿಶ್ವೇಶತೀರ್ಥ ಶ್ರೀಪಾದರ ಬ್ರಹ್ಮವಿದ್ಯಾದಾನದ ಅಪಾರ ಕರುಣೆಯನ್ನು ಪರಮಾದರದಿಂದ ಸ್ಮರಿಸುತ್ತಾ ಅನಂತ ಸಾಷ್ಟಾಂಗಪ್ರಣಾಮಗಳನ್ನು ಸಮರ್ಪಿಸುತ್ತೇನೆ.

ನಮ್ಮ ಪೂರ್ಣಪ್ರಜ್ಞ ಸಂಶೋಧನ ಮಂದಿರದಲ್ಲಿ ದೊರಕಿದ ಸ್ಮೃತಿಮಾಣಿಕ್ಯ ಸಂಗ್ರಹದ ಹಸ್ತಪ್ರತಿಯು ಅನೇಕ ಲೇಖಕ ಪ್ರಮಾದದಿಂದ ಕೂಡಿದ್ದಿತು. ಈ ಕೃತಿಯು ಶೋಧನೆಯು ಸಾಧ್ಯವಿಲ್ಲವೆಂದು ಅನೇಕ ವಿದ್ವಾಂಸರಲ್ಲಿ ಇನ್ನೊಂದು ಹಸ್ತಪ್ರತಿಗಾಗಿ ಪ್ರಾರ್ಥಿಸಿದೆನು. ಆದರೆ ಎಲ್ಲಿಯೂ ಇನ್ನೊಂದು ಹಸ್ತ ಪ್ರತಿ ದೊರಕಲಿಲ್ಲ. ಇಂತಹ ಪ್ರಸಂಗದಲ್ಲಿ ಪರಮಪೂಜ್ಯ ಶ್ರೀಶ್ರೀಸತ್ಯಾತ್ಮತೀರ್ಥ ಶ್ರೀಪಾದರು ಸಂಶೋಧನ ಪ್ರಗತಿಯನ್ನು ವಿಚಾರಿಸುವಾಗ ನನ್ನ ಸಮಸ್ಯೆಯನ್ನರಿತು ತಮ್ಮ ಗ್ರಂಥಾಲಯದಲ್ಲಿರುವ ಹಸ್ತಪ್ರತಿಯನ್ನು ದೊರಕಿಸಿ ಪರಮಾನುಗ್ರಹವನ್ನು ಮಾಡಿದ್ದಾರೆ. ಅವರ ಈ ವಾತ್ಸಲ್ಯದ ಮಹಾಪೂರಕ್ಕೆ ಅನಂತ ಸಾಷ್ಟಾಂಗ ಪ್ರಣಾಮಗಳನ್ನು ಸಮರ್ಪಿಸುತ್ತೇನೆ.

ರಾಷ್ಟ್ರೋತ್ಥಾನ ಮುದ್ರಣಾಲಯದ ಅಧಿಕಾರಿಗಳು ಅಪಾರಶ್ರಮದಿಂದ ಈ ಕೃತಿಯನ್ನು ಸುಂದರವಾಗಿ ಮುದ್ರಿಸಿ ಸಿದ್ಧಪಡಿಸಿದ್ದಾರೆ. ಅವರಿಗೆ ನನ್ನ ಅಭಿನಂದನೆಗಳು.

ಈ ಗ್ರಂಥದ ಮುದ್ರಣಕ್ಕೆ ಭಕ್ತಿಶ್ರದ್ಧೆಯಿಂದ ಹದಿನೈದು ಸಹಸ್ರರೂ.ಗಳನ್ನು ನೀಡಿದ ಶ್ರೀಮತಿ. ಸತ್ಯವತಿ ಇವರನ್ನು ಹಾಗೂ ಕೆ.ಎನ್. ಆನಂದತೀರ್ಥ ಇವರಿಬ್ಬರ ಸೇವೆಯನ್ನು ತುಂಬ ಅಭಿಮಾನದಿಂದ ಉಲ್ಲೇಖಿಸಬಯಸುತ್ತೇನೆ. ಈ ಕುಟುಂಬ ವರ್ಗಕ್ಕೆ ಶ್ರೀಹರಿಯು ಸಕಲವಿಧ ಸನ್ಮಂಗಲವನ್ನು ಉಂಟು ಮಾಡಲೆಂದು ಪ್ರಾರ್ಥಿಸುವುದರ ಜೊತೆಗೆ ಇಂತಹ ಅಪ್ರಕಾಶಿತ ಗ್ರಂಥ ಪ್ರಕಾಶನಕ್ಕೆ ಇವರ ನೆರವು ಸದಾ ಇರಲೆಂಬು ಆಶಿಸುತ್ತೇನೆ.

ಕರಡುಪ್ರತಿ ತಿದ್ದಲು ಮತ್ತು ಹಸ್ತಪ್ರತಿಪಾಠಾಂತರ ದಾಖಲಿಸಲು ಸಹಕರಿಸಿದ ವಿದ್ವಾನ್ ಪ್ರದೀಪಸಿಂಹಾಚಾರ್ಯ ಮತ್ತು ವಿದ್ವಾನ್ ವಿಜಯೀಂದ್ರ ಅಬ್ಬೂರು ಇವರಿಗೆ ನನ್ನ ವಂದನೆಗಳು. ಮಿತವಾದ ಕಾಲದಲ್ಲಿ ನಡೆಸಿದ ಈ ಶೋಧಕಾರ್ಯ ದಲ್ಲಿ ಉಳಿದ ದೋಷಗಳನ್ನು ವಿದ್ವಾಂಸರು ಗಮನಕ್ಕೆ ತಂದು ಉಪಕರಿಸಬೇಕಾಗಿ ವಿನಂತಿಸುತ್ತೇನೆ. ಸಜ್ಜನರು ಇಲ್ಲಿರುವ ವಿಚಾರಗಳನ್ನು ಅಭ್ಯಸಿಸಿ ಸಂತೋಷಹೊಂದಿ ಕೆಲವು ಸಂಗತಿಗಳನ್ನಾದರೂ ಅನುಸಂಧಾನಕ್ಕೆ ತಂದುಕೊಂಡಲ್ಲಿ ಈ ಶ್ರಮವು ಸಾರ್ಥಕವೆಂದು ಭಾವಿಸುತ್ತೇನೆ.

*ಇತಿ ಸುಜನ ವಿಧೇಯ*

ಡಾ। ಎ.ವಿ.ನಾಗಸಂಪಿಗೆ

# Smruti-Manikya Sangraha

*"Sadachara Smruti"* or a compendium of religious codes is one of the important works of philosopher-saint - *Sri Madhvacharya,* who propounded realistic school of philosophy on the monotheistic bedrock of sacred Vedic literature. This work is composed with an objective to lay strict guidelines on daily life & activities of spiritual aspirants' from an orthodox stand point. About 5 to 6 commentaries of this work are available in print today. A hitherto unknown commentary written in metrical verses was brought to light recently. This commentary throws fresh light on the original *"Sadachara Smruti."* Some of the explanations found here are very useful for the right understanding of the original work, which are not found in the commentaries published so far. The author of this metrical commentary on *"Sadachara Smruti"* does not give us any detail about himself expect saying that he is a son of one Anandathirtha belonging to Kagaluru family. Self-denial of the author is noteworthy here. I have attempted to give a brief resume of the important topics discussed in this wonderful metrical commentary for the benefit of the readers.

**Metaphysical dependence on Sri Hari**

All living beings in this universe right from a blade of grass to *Chaturmukha Brahma* are metaphysically dependent on Sri Hari and no commerce of life is possible on this earth without His grace. Acceptance and assimilation of food by all living beings is possible due to indwelling God residing in them. They can speak & hear only when He impels the respective faculties of living beings to do so. To sum up, no act on the part of the living beings is possible without God desiring it. Human bondage is thus due to arrogation of doership upon himself without realizing that it in actual fact belongs to Him. God is all-doer & indepen-

dent without a peer and/or superior. Emancipation from the cycle of life & death enveloped in misery is possible only when God is meditated upon as an independent all-doer. Awareness of His inscrutable power behind the states of living beings viz., from waking to deep sleep & back to waking state is also important. Performance of duty without desiring fruit thereof, not only brings about right knowledge but also takes souls to eternal upliftment.

**Six steps of mandatory righteous duty**

Six steps are necessary for any duty enjoined in the scriptures or even secular duties to be consummated to its fulfillment:

1) Proper understanding of the scriptures [*Apaurusheya & paurusheya*]
2) Belief in one's own way of life [*Shradde*]
3) Being in the company of noble men
4) True devotion towards God
5) Eschewing selfishness & egotism
6) Assiduously following rules & regulation as enjoined in the scriptures

There is a necessity for five sub-steps for the above to stay on a firm foundation:

1) Performance of duties as enjoined in the scriptures at the right time
2) Analysis of duty being performed to one's utmost capacity
3) Maintaining equilibrium of mind
4) Protection of environmental surroundings & its ecological purity
5) Shunning avariciousness

Yearning for love of God will help in getting all types of duties performed in our lives consummated to its fulfillment. Persons engaged in performing duties as enjoined in the Vedas should pay attention these aspects. [Verse: 2 - 20]

**Boundaries of purification by ablution**

Organs of excrement, hands & feet should be washed several times using special kind of soil. The injunction of the handbook of duties [*Dharmashastra*] specifying required number of times for washing and thereby removing impurity from the body stems from the fact that it brings mental happiness. The method of ablution at night can be reduced by half of what it requires for the morning one. For a person afflicted with disease, the prescribed method of ablutions is only one-fourth of what a healthy person is required to adhere-to. It is mandatory to strictly follow the rules & regulation laid out in the religious text books in full while we are at our hometown. Half of it should be observed while in a different town or place. It is good enough to follow one-fourth in big cities. Laxity in observance of rules of ablution during travel is permitted. We are required to be vigilant always to maintain purity progressively despite odds. [Verse: 50 51]

**Early morning ablution [bath] yields great fruit**

As per the vision of *Rishis* found in the mantra 'आपो वै सर्वदेवताः' the water used for bath will have the divine presence of all the gods presiding over our sense organs. Taking bath around 4.30 in the early morning is auspicious as the divine presence of *Ganges* and other holy rivers present will be more efficacious in the water used for bath during this time. This auspicious time is called as *Brahmi-muhurtha.* No religious duty will yield fruit if it is not performed by

taking bath as prescribed. Purity & ablution [taking bath] is necessary to perform duties enjoined in the Vedas. It has a place of reverence equal to that of father & mother. Persons taking bath in the *Brahmi-muhurtha* attains wealth & prosperity, marital happiness at the appropriate age, health, purity, and knowledge, fame & glory etc. Cleansing God given human corporeal body not only removes sin but also horrors born out of bad dreams and sins accumulated due to wicked thoughts. *[Verse: 174 - 182]*

The words of Mahabharata in the *Udyoga Parva* conveyed through *Vidura* popularly called as *Vidura Neeti* is worth a mention here:

गुणा दश स्नानशीलं भजन्ते
वलं रूपं स्वरवर्णप्रशुद्धिः ।
स्पर्शश्च गन्धश्च विशुद्धता च
श्रीसौकुमार्यं प्रवराश्च नार्यः ॥

"Ten qualities come looking for the person who takes bath in the *Brahmi-muhurtha* and they are:

1) Physical prowess
2) Beauty & elegance
3) Purity of speech
4) Attractive personality
5) Physique
6) Pleasant body odor
7) Bodily aura
8) Softness
9) Supple body
10) Good company of damsels [young beautiful women]

From this point of view, taking bath with singular devotion to God is necessary.

**Limitations of purity of attire [clothing]**

It is compulsory to wear two white cloths during performance of *Homa* [fire sacrifice] and religious ritual for worship of God as enjoined in the Vedas. The hem of this white cloth should be tucked in to the waistband. All the ends of the cloth should also be tucked upwards to the waistband. It is considered as religious non-conformance or flaw if the white cloth is not worn as described above and it is equivalent to being naked. Clothing having red or black colour and without hem [stitched fold at the borders] and wet should not be worn during religious performances. Married men are allowed to wear the third sacred thread [*Yajnopaveeta*] instead of top cloth [*uttariya*]. Cloth made out of cotton will be good for one day as far as purity is concerned. Silk clothing will have it for 10 days and 7 days for cloth of fiber. The cloth made out of wool is considered pure always. It is permitted to wear single silk cloth during illness for daily worship. Wearing different cloths severally for each occasion is necessary when in sound health.

**Importance of wearing *Gopichandana* marks**

Wearing gopichandana marks is a pre-eminent part before undertaking any activity as enshrined in the Vedas. Performance of Sandhya, ceremony of the dead, recitation, giving exposition on scriptures, yajna, and oblations to ancestors will not yield fruit if done without wearing *urdhvapundra*. Person not wearing *urdhvapundra* will not be eligible to perform duties prescribed in the Vedas. Women shall also wear *urdhvapundra* and vermilion on it. Women preparing food without wearing *urdhvapundra* is equivalent to cooking spirituous liquor and therefore

discardable. The forehead of a spiritual aspirant without *urdhvapundra* is as defile as graveyard is. One is required to immediately see the Sun as atonement for seeing such a face without *urdhvapundra*. It is essential to wear *urdhvapundra*, which results in bountiful good for us looking at the background of what has been described above.

**Wearing garland of holy basil [Tulasi - Ocymum Sanctum]**

Wearing garland of holy basil is of utmost importance for performing Vedic rituals. One will get liberated seeing a person wearing this garland around the neck. No sin will get afflicted to a person wearing this garland after offering it to God with singular devotion. Person wearing this garland made out of leaf of the basil plant will be untouched by impurity. Each leaf of this holy basil plant brings fruits equivalent to that of Ashwamedha Yajna to a person wearing this garland after offering it to God. Evil Kali cannot even touch persons wearing basil garland.

**Performance of Sandhyavandana three times a day**

In order to cleanse ourselves from the daily sins committed knowingly or unknowingly, we are required to perform Sandhyavandana three times a day. It is important to perform this Vedic ritual at the right times of the day as otherwise untimely performance of it will make one party to the heinous crime equivalent to that of killing Sun-God. This may lead one to take the body of the owl after death. This ritual is required to be performed during early hours in the beginning of the day, afternoon and evening after initiation in to it. Early hours Sandhyavandana is required to be performed while stars are still seen during that time, the afternoon one between 12 noon and 2.30 p.m. and just before sun set in the evening.

**Establishment of restraint on evil [Yantra Lekhana] and offering of ablution using water [Arghya pradana]**

On the orders of Shukracharya - leader of the demoniac clan, the evil natured Vetrapa demon is set to reside in water always. In order to get rid of this demon, who by his presence impurifying the sacred water, we are required to mark a triangular type of Vyahruti. The syllable "hri' should be written at the center of the triangle and 'om' at the vertex of it. Bhooh, Bhuvah & Suvah should be written on the side of the triangle. Again, the syllable 'Vam' should be written at the center of the triangle, which is the principal syllable of the Varuna mantra. Out of the three times of ablution using water [Arghya], the first one will kill demon named Nandapa. His vehicle is destroyed by the second and the third will destroy the entire arms & ammunition of the demoniac clan. Thus, the God should be worshipped by offering oblution three times using water. Demons called 'Mandeha' in big numbers of 350 millions are constantly trying to trouble Sun God. Chaturmukha Brahma has bestowed on these demons immortal bodies and daily death as well, as boons. These demons, who are engaged in daily battle with Sun God, get killed by the offerings of ablution by Brahmins. It is thus the chariot of the Sun God travels on its own orbit without any obstacle.

**Evening Sandhyavandana performed outside the house is auspicious**

It is auspicious to perform evening sandhyavandana near the Tulasi pedestal or near cow-pen outside the house. It is even many more times auspicious if it is performed near a flowing river or water falls. This will free us from the five-fold sins listed below:

1) Committing perjure by accident

